RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಸೋಮವಾರ, ನವೆಂಬರ್ ೧೪, ೨೦೧೬ (ಕಾರ್ತೀಕ ೨೩, ಶಕ ವರ್ಷ ೧೯೩೮) | ನಂ. ೧೨೭೪ |
|---|---|---|
| *Part–I* | *Bengaluru, Monday, November 14, 2016 (Karthika 23, Shaka Varsha 1938)* | *No. 1274* |


## ಆಹಾರ, ನಾಗರಿಕ ಸರಬರಾಜು ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನಶಾಸ್ತ್ರ ಸಚಿವಾಲಯ

## ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ರಾಜ್ಯದ ಎಲ್ಲಾ ನಗರ / ಪಟ್ಟಣ ಸ್ಥಳೀಯ ಸಂಸ್ಥೆಗಳ ಪ್ರದೇಶಗಳಲ್ಲಿ ಪಡಿತರ ಚೀಟಿ ವಿತರಿಸುವ ಅಧಿಕಾರವನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂ: ಆನಾಸ 116 ಡಿಆರ್‌ಎ 2015 ದಿನಾಂಕ: 16.08.2016

**ಪ್ರಸ್ತಾವನೆ:**

ರಾಜ್ಯದಲ್ಲಿ ಜನವರಿ–2014 ರಿಂದ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ–2013 ಜಾರಿಗೆ ಬಂದ ನಂತರ, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ"ಲ್ಲಿ ಪಡಿತರ ಚೀಟಿಗಳನ್ನು ಆದ್ಯತಾ ಹಾಗೂ ಆದ್ಯತೇತರ ಪಡಿತರ ಚೀಟಿಗಳೆಂದು ವರ್ಗೀಕರಿಸಲಾಗಿರುತ್ತದೆ. ಇದಲ್ಲದೆ ಈಗಾಗಲೇ ಚಾಲ್ತಿಯಲ್ಲಿರುವ ಎಎವೈ (ಅಂತ್ಯೋದಯ ಅನ್ನಯೋಜನೆ) ವರ್ಗೀಕರಣದ ಪಡಿತರ ಚೀಟಿಗಳು ಸಹ ಮುಂದುವರೆದಿರುತ್ತವೆ, ಆದರೆ, ಹೊಸ ಎಎವೈ ಪಡಿತರ ಚೀಟಿಗಳನ್ನು ವಿತರಣೆ ಮಾಡುವುದಕ್ಕೆ ಅವಕಾಶವಿರುವುದಿಲ್ಲ. ಆದ್ಯತಾ ಹಾಗೂ ಎಎವೈ ಪಡಿತರ ಚೀಟಿಗಳನ್ನು ಹೊಂದಿದ ಕುಟುಂಬಗಳನ್ನು ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ–2013 ಯನ್ವಯ ಒಟ್ಟಾಗಿ ಅರ್ಹ ಕುಟುಂಬಗಳೆಂದು ಕರೆಯಲಾಗಿದೆ. ಸದರಿ ಕಾಯ್ದೆಯನ್ವಯ ಎಲ್ಲಾ ಆದ್ಯತಾ ಕುಟುಂಬಗಳಿಗೆ ಪ್ರತಿ ಯೂನಿಟಿಗೆ 5 ಕೆ.ಜಿ.ಯಂತೆ ಹಾಗೂ ಅಂತ್ಯೋದಯ ಪಡಿತರ ಚೀಟಿಗಳಿಗೆ ಪ್ರತಿ ಪಡಿತರ ಚೀಟಿಗೆ 35 ಕೆ.ಜಿ. ಯಂತೆ ರಾಜ್ಯ ಸರ್ಕಾರದ ಸಹಾಯಧನದೊಂದಿಗೆ ಆಹಾರಧಾನ್ಯಗಳನ್ನು ಉಚಿತವಾಗಿ ವಿತರಿಸಲಾಗುತ್ತಿದೆ. ಆದ್ಯತೇತರ ಕುಟುಂಬಗಳಿಗೆ ಸಹ ರಿಯಾಯಿತಿ ದರದಲ್ಲಿ ರಾಜ್ಯ ಸರ್ಕಾರದಿಂದ ಆಹಾರಧಾನ್ಯಗಳನ್ನು ವಿತರಿಸಲಾಗುತ್ತಿದೆ.

ಮೇಲೆ ಓದಲಾದ ದಿನಾಂಕ:16.08.2016ರ ಸರ್ಕಾರಿ ಆದೇಶದಲ್ಲಿ, ಸಾರ್ವಜನಿಕ ಪಡಿತರ ವಿತರಣಾ ಪದ್ಧತಿಯಡಿ ಆದ್ಯತೇತರ ಕುಟುಂಬಗಳನ್ನು ಗುರುತಿಸಲು ಈ ಕೆಳಕಂಡ ಹೊಸ ಮಾನದಂಡಗಳನ್ನು ನಿಗಧಿಪಡಿಸಲಾಗಿದೆ:–

1) ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು / ಮಂಡಳಿಗಳು / ನಿಗಮಗಳು / ಸ್ವಾಯತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ / ಸೇವಾ ತೆರಿಗೆ / ವ್ಯಾಟ್ ಪಾವತಿಸುವ ಎಲ್ಲಾ ಕುಟುಂಬಗಳು,
2) ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣ ಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶದಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು,
3) ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನವನ್ನು ಹೊಂದಿರುವ ಎಲ್ಲಾ ಕುಟುಂಬಗಳು,
4) ಪ್ರತಿ ಮಾಹೆ 150 ಯುನಿಟ್‌ಗಳಿಗಿಂತಲೂ ಹೆಚ್ಚಿನ ವಿದ್ಯುಚ್ಛಕ್ತಿಯನ್ನು ಬಳಕೆ ಮಾಡುವ ಕುಟುಂಬಗಳು.

ಮೇಲೆ ತಿಳಿಸಿರುವಂತೆ ಗುರುತಿಸಲಾದ ಆದ್ಯತೇತರ ಕುಟುಂಬಗಳನ್ನು ಹೊರತುಪಡಿಸಿ, ಉಳಿದ ಕುಟುಂಬಗಳು ಆದ್ಯತಾ ಪಡಿತರ ಚೀಟಿಯನ್ನು ಪಡೆಯಲು ಅರ್ಹ ಕುಟುಂಬವೆಂದು ಪರಿಗಣಿಸತಕ್ಕದ್ದೆಂದು ಸದರಿ ಆದೇಶದಲ್ಲಿ ತಿಳಿಸಲಾಗಿದೆ.

ಇಲಾಖೆಯಲ್ಲಿ ಆನ್‌ಲೈನ್ ಮೂಲಕ ಪಡಿತರ ಚೀಟಿ ಕೋರಿ ಅರ್ಜಿಗಳು ಸ್ವೀಕೃತವಾಗುತ್ತಿದ್ದು, ಆಧ್ಯತಾ ಪಡಿತರ ಚೀಟಿಗಳ ಅರ್ಜಿಗಳನ್ನು ಸ್ಥಳ ಪರಿಶೀಲನೆ ಮಾಡಿದ ನಂತರವೇ ಅರ್ಹತೆಗನುಗುಣವಾಗಿ ವಿತರಿಸಬೇಕಾಗಿರುತ್ತದೆ.

ಪಡಿತರ ಚೀಟಿ ವಿತರಿಸುವಾಗ ಅರ್ಜಿದಾರರು ಆದ್ಯತಾ ಪಡಿತರ ಚೀಟಿ ಪಡೆಯಲು ಅರ್ಹತೆಯನ್ನು ಹೊಂದಿದ್ದಾರೆಯೇ ಅಥವಾ ಇಲ್ಲವೇ ಎಂಬುದನ್ನು ಸ್ಥಳೀಯ ಅಧಿಕಾರಿಗಳು ನಿರ್ದಿಷ್ಟವಾಗಿ ಹೇಳಲು ಸಮರ್ಥವಾಗಿರುತ್ತಾರೆ.

ಆದುದರಿಂದ, ರಾಜ್ಯದ ಎಲ್ಲಾ ನಗರ / ಪಟ್ಟಣ ಸ್ಥಳೀಯ ಸಂಸ್ಥೆಗಳ ಪ್ರದೇಶಗಳಲ್ಲಿ ಕಂದಾಯ ಅಧಿಕಾರಿಗಳು ಅಥವಾ ಆರೋಗ್ಯ ನಿರೀಕ್ಷಕರು ಮತ್ತು ಅವರಿಗೆ ಮೇಲ್ಪಟ್ಟ ಅಧಿಕಾರಿಗಳಿಗೆ ಪಡಿತರ ಚೀಟಿ ವಿತರಣೆ ಮಾಡುವ ಅಧಿಕಾರವನ್ನು ಪ್ರತ್ಯಾಯೋಜಿಸಲು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆನಾಸ 180 ಡಿಆರ್‌ಎ 2016(ಭಾಗ–1), ಬೆಂಗಳೂರು, ದಿನಾಂಕ: 11.11.2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ರಾಜ್ಯದ ಎಲ್ಲಾ ನಗರ / ಪಟ್ಟಣ ಸ್ಥಳೀಯ ಸಂಸ್ಥೆಗಳ ಪ್ರದೇಶಗಳಲ್ಲಿನ, ಸ್ಥಳೀಯ ಸಂಸ್ಥೆಗಳ ಸಂಬಂದಪಟ್ಟ ಕಂದಾಯ ಅಧಿಕಾರಿಗಳು ಅಥವಾ ಆರೋಗ್ಯ ನಿರೀಕ್ಷಕರು ಮತ್ತು ಅವರಿಗೆ ಮೇಲ್ಪಟ್ಟ ಅಧಿಕಾರಿಗಳಿಗೆ ಪಡಿತರ ಚೀಟಿ ವಿತರಿಸಲು ಅಧಿಕಾರ ಪ್ರತ್ಯಾಯೋಜಿಸಿದೆ. ಕಂದಾಯ ಅಧಿಕಾರಿಗಳು ಅಥವಾ ಆರೋಗ್ಯ ನಿರೀಕ್ಷಕರು ಮತ್ತು ಅವರಿಗೆ ಮೇಲ್ಪಟ್ಟ ಅಧಿಕಾರಿಗಳು ಪಡಿತರ ಚೀಟಿ ಕೋರಿ ತಂತ್ರಾಂಶದ ಮೂಲಕ ಬಂದ ಅರ್ಜಿಯನ್ನು ಈ ಕೆಳಕಂಡ ವಿಷಯಗಳ ಕುರಿತು ಪರಿಶೀಲಿಸಿ, ತಂತ್ರಾಂಶದ ಮೂಲಕ ಪಡಿತರ ಚೀಟಿಗಳ ಅರ್ಜಿಗಳನ್ನು ವಿಲೇಗೊಳಿಸಲು ಹಾಗೂ ಈ ಆದೇಶ ಜಾರಿಗೆ ಬಂದ ನಂತರ ಸ್ವೀಕೃತವಾಗುವ ಅರ್ಜಿಗಳನ್ನು "ಸಕಾಲ" ಯೋಜನೆಯಡಿ ನಿಗಧಿಪಡಿಸಿರುವ ಕಾಲಮಿತಿಯಂತೆ 7 ದಿನಗಳೊಳಗಾಗಿ ವಿಲೇಗೊಳಿಸಲು ಆದೇಶಿಸಿದೆ.

1) ಪಡಿತರ ಚೀಟಿ ಅರ್ಜಿದಾರರು ಮೇಲೆ ಓದಲಾದ ದಿನಾಂಕ: 16.08.2016 ರ ಸರ್ಕಾರಿ ಆದೇಶದ ಮಾನದಂಡಗಳನ್ವಯ ಅರ್ಹತೆಯನ್ನು ಹೊಂದಿದ್ದಾರೆಯೇ;
2) ಪಡಿತರ ಚೀಟಿ ಅರ್ಜಿದಾರರ ಕುಟುಂಬದ ಸದಸ್ಯರ ಆಧಾರ್ ಸಂಖ್ಯೆಗಳನ್ನು ಸರಿಯಾಗಿ ಹೊಂದಾಣಿಕೆ ಮಾಡಲಾಗಿದೆಯೇ;
3) ಅರ್ಜಿದಾರ ಕುಟುಂಬದ ಮುಖ್ಯಸ್ಥೆ ಮತ್ತು ಸದಸ್ಯರ ನಡುವಿನ ಸಂಬಂಧಗಳನ್ನು ಸರಿಯಾಗಿ ನಮೂದಿಸಲಾಗಿದೆಯೇ;
4) ವಿಳಾಸ ಸರಿಯಿದೆಯೇ ಹಾಗೂ ಕುಟುಂಬದ ಎಲ್ಲಾ ಸದಸ್ಯರುಗಳು ಸದರಿ ವಿಳಾಸದಲ್ಲಿ ವಾಸಿಸುತ್ತಿರುವರೇ;

ಈಗಾಗಲೇ ಅರ್ಜಿ ಸ್ವೀಕೃತಿಯಾಗಿ, ವಿತರಣೆಗೆ ಬಾಕಿಯಿರುವ ಪಡಿತರ ಚೀಟಿಗಳ ವಿತರಣೆ ಮಾಡಬೇಕಾಗಿರುವಂತಹ ಅರ್ಜಿಗಳನ್ನು ಒಮ್ಮೆ ಪರಿಶೀಲನೆ ಮಾಡಿ ವಿತರಣೆ ಮಾಡುವುದು; ನಂತರ ಆಗ್ಗಿಂದಾಗೆ ಸ್ವೀಕೃತವಾಗುವ ಅರ್ಜಿಗಳನ್ನು ವಿಲೇವಾರಿ ಮಾಡುವ ಕೆಲಸಗಳನ್ನು ನಿರ್ವಹಿಸುವುದು; ಅರ್ಜಿಗಳನ್ನು ಪರಿಶೀಲನೆ ಹಾಗೂ ಪಡಿತರ ಚೀಟಿಗಳ ವಿತರಣೆಗೆ ನಿಗದಿಪಡಿಸಿರುವ ವೆಚ್ಚವನ್ನು ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕ ವ್ಯವಹಾರಗಳ ಇಲಾಖೆಯು ಸಂಪೂರ್ಣವಾಗಿ ಭರಿಸತಕ್ಕದ್ದು;

ಪಡಿತರ ಚೀಟಿ ಕೋರಿ ಸಲ್ಲಿಕೆಯಾಗುವ ಅರ್ಜಿಗಳನ್ನು ಇತ್ಯರ್ಥಪಡಿಸಲು ಅಧಿಕೃತಗೊಳಿಸುವ ಅಧಿಕಾರಿಗಳಿಗೆ, ಸಂಬಂಧಪಟ್ಟ ಸ್ಥಳೀಯ ಸಂಸ್ಥೆಗಳ ಆಯುಕ್ತರು / ಮುಖ್ಯಾಧಿಕಾರಿಗಳು ವಾರ್ಡ್‌ಗಳನ್ನು ಹಂಚಿಕೆ ಮಾಡತಕ್ಕದ್ದು; ಪಡಿತರ ಚೀಟಿ ಅರ್ಜಿಗಳನ್ನು ಪರಿಶೀಲಿಸಿ ವಿಲೇವಾರಿ ಮಾಡಲು ಸದರಿ ಅಧಿಕೃತ ಅಧಿಕಾರಿಗಳಿಗೆ ತಂತ್ರಾಂಶದಲ್ಲಿ ಬಯೋಮೆಟ್ರಿಕ್ ಆಧಾರಿತ ಲಾಗಿನ್ ಐ.ಡಿ.ಯನ್ನು ಒದಗಿಸತಕ್ಕದ್ದು;

ಈ ಮೇಲೆ ತಿಳಿಸಿದಂತೆ ವಿಲೇಗೊಳಿಸಲಾದ ಪಡಿತರ ಚೀಟಿಗಳನ್ನು ಆಹಾರ ಇಲಾಖಾ ವತಿಯಿಂದ ಕೇಂದ್ರಿಕೃತ ಸ್ಥಳದಲ್ಲಿ ಮುದ್ರಿಸಿ, ಅರ್ಜಿದಾರರ ವಿಳಾಸಕ್ಕೆ ಸ್ಪೀಡ್ ಪೋಸ್ಟ್ ಮೂಲಕ ರವಾನಿಸಲಾಗುವುದು.

ಈ ಆದೇಶವನ್ನು ನಗರಾಭಿವೃದ್ಧಿ ಇಲಾಖೆಯು ಆನಾಸ 538 ಡಿಆರ್‌ಎ 2015ರ ಕಂಡಿಕೆ 106ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಗ್ರಾಹಕರ ವ್ಯವಹಾರಗಳ
ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: ೨೦೦

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಮಂಗಳವಾರ, ನವೆಂಬರ್ ೧೫, ೨೦೧೬ (ಕಾರ್ತೀಕ ೨೪, ಶಕ ವರ್ಷ ೧೯೩೮) | ನಂ. ೧೨೭೫ |
|---|---|---|
| ***Part–I*** | ***Bengaluru, Tuesday, November 15, 2016 (Karthika 24, Shaka Varsha 1938)*** | ***No. 1275*** |


**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಆಯುಷ್ ಇಲಾಖೆಯ ವ್ಯಾಪ್ತಿಗೊಳಪಡುವ ಆಯುರ್ವೇದ/ ಹೋಮಿಯೋಪತಿ/ ಯುನಾನಿ ಮತ್ತು ಯೋಗ ಮತ್ತು ಪ್ರಕೃತಿ ಚಿಕಿತ್ಸೆ ವೈದ್ಯಕೀಯ ಮಹಾವಿದ್ಯಾಲಯಗಳ ಬೋಧಕ ವೃಂದದ ಹುದ್ದೆಗಳಾದ ಉಪನ್ಯಾಸಕರು, ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಅನುಕ್ರಮವಾಗಿ ಸಹಾಯಕ ಪ್ರಾಧ್ಯಾಪಕರು ಮತ್ತು ಸಹ ಪ್ರಾಧ್ಯಾಪಕರ ಹುದ್ದೆಗಳೆಂದು ಮರುಪದನಾಮೀಕರಿಸುವ (Re-designation) ಬಗ್ಗೆ –ಆದೇಶ

**ಓದಲಾಗಿದೆ:** ಆಯುಷ್ ನಿರ್ದೇಶನಾಲಯದ ಪ್ರಸ್ತಾವನೆ ಸಂಖ್ಯೆ: ಆಯುಷ್/72/ ಸಿಬ್ಬಂದಿ(1)/2011–12, ದಿನಾಂಕ:6–12–2013, 3–1–2015. ಹಾಗೂ 17–12–2015.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖಿತ ಆಯುಷ್ ನಿರ್ದೇಶಕರ ಪ್ರಸ್ತಾವನೆಗಳಲ್ಲಿ, ಆಯುಷ್ ಇಲಾಖೆಯ ಬೋಧಕ ವೃಂದದ ಹುದ್ದೆಗಳಾದ ಉಪನ್ಯಾಸಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಕರ ಹುದ್ದೆಗಳ ಪದನಾಮಗಳನ್ನು ಅನುಕ್ರಮವಾಗಿ ಸಹಾಯಕ ಪ್ರಾಧ್ಯಾಪಕರು, ಸಹ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಕರ ವೃಂದದ ಹುದ್ದೆಗಳೆಂದು ಸಿಸಿಐಎಂ ಮತ್ತು ಸಿಸಿಹೆಚ್ ರವರ ಮಾರ್ಗಸೂಚಿಗಳ ಪ್ರಕಾರ ಮರುಪದನಾಮೀಕರಿಸಿ ಮತ್ತು ಎ.ಐ.ಸಿ.ಟಿ.ಇ. ವೇತನ ಶ್ರೇಣಿಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಅಳವಡಿಸಿಕೊಂಡಿರುವ ಮಾದರಿಯಂತೆ ಆಯುಷ್ ಇಲಾಖೆಯ ಬೋಧಕ ವೃಂದದ ಹುದ್ದೆಗಳಿಗೂ ಅಳವಡಿಸಿ ಪರಿಷ್ಕೃತ ವೇತನ ಶ್ರೇಣಿಯನ್ನು ಸಹ ನಿಗಧಿಗೊಳಿಸುವಂತೆ ಹಾಗೂ ಈ ರೀತಿ ನಿಗಧಿಗೊಳಿಸಿದ್ದಲ್ಲಿ ಸರ್ಕಾರಕ್ಕೆ ರೂ.576.68 ಲಕ್ಷ ಹೆಚ್ಚುವರಿ ವೆಚ್ಚವಾಗುವುದಾಗಿ ತಿಳಿಸಿ ಪದನಾಮ ಬದಲಾವಣೆಗೆ ಸರ್ಕಾರದ ಹಂತದಲ್ಲಿ ಸೂಕ್ತ ಕ್ರಮ ಕೈಗೊಳ್ಳುವಂತೆ ಕೋರಿದ್ದಾರೆ.

ಆಯುಷ್ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಇಲಾಖೆಯಲ್ಲಿ ಉಪನ್ಯಾಸಕರು, ಸಹಾಯಕ ಪ್ರಾಧ್ಯಾಪಕರು, ಪ್ರಾಧ್ಯಾಪಕರು ಮತ್ತು ಪ್ರಾಂಶುಪಾಲರ ಹುದ್ದೆಗಳಿದ್ದು, ಸಹ ಪ್ರಾಧ್ಯಾಪಕರ ಹುದ್ದೆಯು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ಇರುವುದಿಲ್ಲ. **ಉಪನ್ಯಾಸಕರ ಹುದ್ದೆಯ ಪದನಾಮವನ್ನು ಸಹಾಯಕ ಪ್ರಾಧ್ಯಾಪಕರ ಹುದ್ದೆ ಎಂದು ಮತ್ತು ಸಹಾಯಕ ಪ್ರಾಧ್ಯಾಪಕರ ಹುದ್ದೆಯ ಪದನಾಮವನ್ನು ಸಹ ಪ್ರಾಧ್ಯಾಪಕರ ಹುದ್ದೆಯನ್ನಾಗಿ (Associate Professor)** ಮರುಪದನಾಮೀಕರಿಸಿದಾಗ ತತ್ಪರಿಣಾಮವಾಗಿ ರೂ.15600–39100 **AGP** 8000 ಎಂದು ಮತ್ತು 37400–67000 **AGP** 9000 ಎಂದು ಪರಿಷ್ಕೃತ ವೇತನ ಶ್ರೇಣಿಯನ್ನು (ಎ.ಐ.ಸಿ.ಟಿ.ಇ) ವೈದ್ಯಕೀಯ ಶಿಕ್ಷಣ ಇಲಾಖೆಯ ಬೋಧಕ ವೃಂದಕ್ಕೆ ನಿಗಧಿಪಡಿಸಿರುವಂತೆ ಆಯುಷ್ ಇಲಾಖೆಗೂ ಸಿಸಿಐಎಂ/ಸಿಸಿಹೆಚ್ ಮಾರ್ಗಸೂಚಿಗಳನ್ವಯ ನಿಗಧಿಗೊಳಿಸಿದ್ದಲ್ಲಿ ರೂ.576.68 ಲಕ್ಷಗಳ ಹೆಚ್ಚಿನ ಆರ್ಥಿಕ ಹೊರೆ ಉಂಟಾಗುತ್ತದೆ. ಈ ವೆಚ್ಚವನ್ನು ಮುಂದುವರೆದ

ಯೋಜನೆಯ ಸಿಬ್ಬಂದಿ ವೇತನ ಲೆಕ್ಕಶೀರ್ಷಿಕೆ 2210–05–101–103ರಡಿ ಭರಿಸಿಕೊಳ್ಳಬೇಕಾಗಿದ್ದು, ಪ್ರತಿ ಶೈಕ್ಷಣಿಕ ಸಾಲಿನಲ್ಲಿ ಆಯುಷ್ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಕೋರ್ಸ್‌ಗಳನ್ನು ಮುಂದುವರೆಸಲು, ಜನವರಿ / ಫೆಬ್ರವರಿ ಮಾಹೆಗಳಲ್ಲಿ ನವದೆಹಲಿಯ ಸಿಸಿಐಎಂ ಮತ್ತು ಸಿಸಿಎಚ್ ಸಂಸ್ಥೆಯವರು ತಪಾಸಣೆ ನಡೆಸುವುದರಿಂದ ಸದರಿ ಸಂಸ್ಥೆಗಳ ಮಾರ್ಗಸೂಚಿಗಳನ್ವಯ ಖಾಲಿ ಇರುವ ಹುದ್ದೆಗಳನ್ನು ಮತ್ತು ಸಿಸಿಐಎಂನ ಪ್ರಕಾರ ಪದನಾಮಗಳನ್ನು ಮರುಪದನಾಮೀಕರಿಸುವುದು ಅವಶ್ಯವಿರುತ್ತದೆ.

ಆದ್ದರಿಂದ ಸರ್ಕಾರವು ಆಯುಷ್ ಇಲಾಖೆಯ ವೈದ್ಯಕೀಯ ಮಹಾವಿದ್ಯಾಲಯಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬೋಧಕ ವೃಂದದ ಹುದ್ದೆಗಳಾದ ಉಪನ್ಯಾಸಕರು, ಸಹಾಯಕ ಪ್ರಾಧ್ಯಾಪಕರು ಮತ್ತು ಪ್ರಾಧ್ಯಾಪಕರ ಹುದ್ದೆಗಳನ್ನು Central Council of Indian Medicine (Minimum Standards of Education in Indian Medicine) (Amendment) Regulations 2012ರ ಪ್ರಕಾರ ಮರುಪದನಾಮೀಕರಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 50 ಪಿಟಿಡಿ 2015 ಬೆಂಗಳೂರು, ದಿನಾಂಕ: 15–11–2016**

**ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ,** ಸರ್ಕಾರಿ ಆಯುಷ್ ಬೋಧಕ ವರ್ಗದ ಈ ಕೆಳಕಂಡ ಹುದ್ದೆಗಳನ್ನು Central Council of Indian Medicine (Minimum Standards of Education in Indian Medicine) (Amendment) Regulations 2012 ಪ್ರಕಾರ ಮರುಪದನಾಮೀಕರಿಸಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

| Sl. No. | Existing Posts | Re-designation | Grade Pay | Recruitment qualification |
|---|---|---|---|---|
| 1 | Lecturer | Assistant Professor | Rs.15600-39100+AGP 8000 | Entry level post must possess Bachelor Degree and post Graduate Degree |
| 2 | Assistant Professor | Associate Professor | Rs.37400-67000+AGP 9000 | Must have put in not less than 5 years in the cadre of Assistant Professor |
| 3 | Professor | Professor | Rs.37400-67000+10000 | Must have put in not less than 5 years in the cadre of Associate Professor |

**ಸಹಪ್ರಾಧ್ಯಾಪಕರ ಹೆಚ್ಚುವರಿ ಹುದ್ದೆಗಳನ್ನು ಯಾವುದೇ ಕಾರಣಕ್ಕೂ ಸೃಜಿಸತಕ್ಕದ್ದಲ್ಲ ಹಾಗೂ 3 ಹಂತದ ಪದನಾಮಗಳುಳ್ಳ ಬೋಧಕ ವರ್ಗದ ಹುದ್ದೆಗಳ ವೃಂದ ಬಲದಲ್ಲಿ ಯಾವುದೇ ಬದಲಾವಣೆಗೆ ಒಳಪಡದ ಷರತ್ತಿಗೊಳಪಟ್ಟಿದೆ.**

ಸದರಿ ಹುದ್ದೆಗಳನ್ನು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ನಿಯಮಾನುಸಾರ ಅಳವಡಿಸಿಕೊಳ್ಳಲು ಸೂಕ್ತ ಪ್ರಸ್ತಾವನೆ ಸಲ್ಲಿಸುವುದು.

**ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: FD 759 Exp-5/2016, ದಿನಾಂಕ: 03–11–2016ರ ಸಹಮತಿಯನ್ವಯ ಹೊರಡಿಸಲಾಗಿದೆ.**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಕಮಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 100

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಮಂಗಳವಾರ, ನವೆಂಬರ್ ೧೫, ೨೦೧೬ (ಕಾರ್ತೀಕ ೨೪, ಶಕ ವರ್ಷ ೧೯೩೮) | ನಂ. ೧೨೭೬ |
|---|---|---|
| *Part–I* | *Bengaluru, Tuesday, November 15, 2016 (Karthika 24, Shaka Varsha 1938)* | *No. 1276* |

**ಸಂಸದೀಯ ವ್ಯವಹಾರಗಳ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಅಸ್ವಾಭಿಕವಾಗಿ ಮರಣ ಹೊಂದಿದ ಶಾಸಕರಾದ ದಿವಂಗತ ಶ್ರೀ ಎ. ವೆಂಕಟೇಶ ನಾಯಕ, ಇವರ ಕುಟುಂಬದವರಿಗೆ ಪರಿಹಾರ ಧನವನ್ನು ನೀಡುವ ಕುರಿತು.

**ಓದಲಾಗಿದೆ:** **(1)** ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 04 ಸಂವ್ಯವಿ 97, ದಿ: 29.07.97
**(2)** ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 10 ಸಂವ್ಯವಿ 2016, ದಿ: 20.08.2016

**ಪ್ರಸ್ತಾವನೆ:**

ಮೇಲೆ ಓದಲಾದ (2) ರಲ್ಲಿ ವಿಧಾನ ಸಭೆ ಸದಸ್ಯರಾಗಿದ್ದ ದಿವಂಗತ ಶ್ರೀ ಎ.ವೆಂಕಟೇಶ್ ನಾಯಕ್, ದೇವದುರ್ಗ, ಇವರು ಅಸ್ವಾಭಾವಿಕವಾಗಿ ದಿನಾಂಕ: 24.08.2015ರಂದು ಮರಣ ಹೊಂದಿದ್ದರಿಂದ ಅವರ ಪತ್ನಿ ಶ್ರೀಮತಿ ಸಾವಿತ್ರಿ ದೇವಿ, ಅರಕೇರಾ ಗ್ರಾಮ, ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ, ಇವರಿಗೆ ರೂ.5.00 ಲಕ್ಷಗಳ ಪರಿಹಾರಧನವನ್ನು ಮಂಜೂರು ಮಾಡಲಾಗಿದೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 375 ವೆಚ್ಚ 10/2016, ದಿನಾಂಕ: 07.10.2016 ರಲ್ಲಿ ವಿಧಾನ ಸಭೆಯ ಮಾಜಿ ಸದಸ್ಯರಾದ ದಿವಂಗತ ಶ್ರೀ ಎ.ವೆಂಕಟೇಶ್ ನಾಯಕ ಇವರ ಕುಟುಂಬಕ್ಕೆ ಪರಿಹಾರ ನೀಡಲು ರೂ.5.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ 2052–00–090–0–08 (NP) (100) – relief ಎಂಬ ಹೊಸ ಉಪಶೀರ್ಷಿಕೆಯಡಿಯಲ್ಲಿ ಹೆಚ್ಚುವರಿ ಅನುದಾನವನ್ನು SE-II ರಲ್ಲಿ ಒದಗಿಸಿರುತ್ತದೆ. ಮೇಲೆ ಓದಲಾದ (2) ರಲ್ಲಿ ಲೆಕ್ಕಶೀರ್ಷಿಕೆ 2052–ಸಚಿವಾಲಯ ಸಾಮಾನ್ಯ ಸೇವೆಗಳು–00–090–0–08 ಎಂದು ತಪ್ಪಾಗಿ ನಮೂದಾಗಿರುತ್ತದೆ.

ಆದ್ದರಿಂದ ಈ ತಿದ್ದುಪಡಿ ಆದೇಶ:–

**ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಸಂವ್ಯಶಾಇ 10 ಸಂವ್ಯವಿ 2016 ದಿನಾಂಕ: 15.11.2016**

ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 10 ಸಂವ್ಯವಿ 2016, ದಿ: 20.08.2016 ರಲ್ಲಿ ಸದರಿ ವೆಚ್ಚವನ್ನ "ಲೆಕ್ಕ ಶೀರ್ಷಿಕೆ 2052–ಸಚಿವಾಲಯ ಸಾಮಾನ್ಯ ಸೇವೆಗಳು–00–090–0–08 ರಲ್ಲಿ ಅಸ್ವಾಭಾವಿಕವಾಗಿ ಮರಣ ಹೊಂದಿದ್ದು, ಶಾಸಕರು ಸಂಸತ್ ಸದಸ್ಯರ ಕುಟುಂಬಕ್ಕೆ ಪರಿಹಾರ" ಎಂಬ ಸಂಖ್ಯೆಗಳು ಮತ್ತು ಪದಗಳ ಬದಲಾಗಿ "ಮಂಜೂರು ಮಾಡಲಾದ ರೂ. 5.00 ಲಕ್ಷಗಳ ಮೊಬಲಗನ್ನು ಮೊದಲು ಸಾದಿಲ್ವಾರು ನಿಧಿಯ ಲೆಕ್ಕ ಶೀರ್ಷಿಕೆ: 8000–00–215–0–00

ರಡಿ ಬಿಡುಗಡೆ ಮಾಡಿ ನಂತರ ಲೆಕ್ಕಶೀರ್ಷಿಕೆ: 2052–00–90–0–08–100 ಧನಸಹಾಯ (ಯೋಜನೆತರ) ರಡಿ ಪೂರಕ ಅಂದಾಜು–2ರಲ್ಲಿ ನಿಧಿಗೆ ಮರು ತುಂಬಲಾಗುವುದು.

ಆರ್ಥಿಕ ಇಲಾಖೆಯು ರೂ. 5.00 ಲಕ್ಷಗಳನ್ನು (ರೂಪಾಯಿ ಐದು ಲಕ್ಷಗಳನ್ನು) ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಆಡಳಿತ ಇಲಾಖೆಯು ಈ ಪ್ರತ್ಯೇಕ ಆದೇಶವಿಲ್ಲದೆಯೇ ಈ ಆದೇಶದ ಮೇಲೆಯೇ ಮೊಬಲಗನ್ನು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆ ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದು." ಎಂದು ಓದಿಕೊಳ್ಳುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 441 ವೆಚ್ಚ–10/2016, ದಿನಾಂಕ: 08.11.2016 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 2

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| | | |
|---|---|---|
| ಭಾಗ–I | ಬೆಂಗಳೂರು, ಶುಕ್ರವಾರ, ನವೆಂಬರ್ ೧೮, ೨೦೧೬ (ಕಾರ್ತೀಕ ೨೭, ಶಕ ವರ್ಷ ೧೯೩೮) | ನಂ. ೧೨೭೮ |
| Part–I | Bengaluru, Friday, November 18, 2016 (Karthika 27, Shaka Varsha 1938) | No. 1278 |



### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು

**ಉಪಸ್ಥಿತರು** : ಎನ್.ಎಸ್.ಮೇಘರಿಖ್, ಐ.ಪಿ.ಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

**ವಿಷಯ** : ದಿನಾಂಕ: 19.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ ದಿನಾಂಕ: 21.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ಈಶಾನ್ಯ ವಿಭಾಗದ ಚಿಕ್ಕಜಾಲ ಪೊಲೀಸ್ ಠಾಣೆ ಮತ್ತು ಬಾಗಲೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮದ್ಯ ಮಾರಾಟವನ್ನು ನಿಷೇಧಿಸುವ ಬಗ್ಗೆ

**ಉಲ್ಲೇಖ** :
1. ರಾಜ್ಯ ಚುನಾವಣಾ ಆಯೋಗದ ಪತ್ರ ಸಂಖ್ಯೆ:ರಾಚುಆ:42:ಇಜಿಪಿ:2016, ದಿನಾಂಕ: 04–11–2016
2. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಕಛೇರಿಯ ಪತ್ರ ಸಂಖ್ಯೆ:ಎಂಎಜಿ(4)/ಮಿಸ್.ಸಿಆರ್/139/2016–17, ದಿನಾಂಕ:05.11.2016

– – – –

**ಪ್ರಸ್ತಾವನೆ :**

ರಾಜ್ಯ ಚುನಾವಣಾ ಆಯೋಗವು ಬೆಂಗಳೂರು ಉತ್ತರ ತಾಲ್ಲೂಕಿನ ಬೆಟ್ಟಹಲಸೂರು, ಬಾಗಲೂರು ಮತ್ತು ಸಾತನೂರು ಗ್ರಾಮ ಪಂಚಾಯಿತಿ ಚುನಾವಣೆಯ ದಿನಾಂಕವನ್ನು ಪ್ರಕಟಿಸಿದ್ದು, ಬೆಂಗಳೂರು ನಗರ ವ್ಯಾಪ್ತಿಯಲ್ಲಿ ಮತದಾನ ದಿನಾಂಕ: 20.11.2016 ರಂದು ನಡೆಯುತ್ತದೆ. ಈ ಹಿನ್ನೆಲೆಯಲ್ಲಿ ಮತದಾನ ಪ್ರಕ್ರಿಯೆಯು ಶಾಂತವಾಗಿ ಮತ್ತು ಮುಕ್ತವಾಗಿ ನಡೆಯುವಂತಾಗಲು ಚುನಾವಣಾ ಕ್ಷೇತ್ರ ವ್ಯಾಪ್ತಿಯಲ್ಲಿ ಮದ್ಯ ಮಾರಾಟವನ್ನು ನಿಷೇಧಿಸುವಂತೆ ಮೇಲಿನ ಉಲ್ಲೇಖ–1 ರನ್ವಯ ರಾಜ್ಯ ಚುನಾವಣಾ ಆಯೋಗ, ಕರ್ನಾಟಕ ರಾಜ್ಯ ಮತ್ತು ಉಲ್ಲೇಖ–2 ರನ್ವಯ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರುಗಳು ಈ ಕಛೇರಿಗೆ ಕೋರಿಕೆ ಸಲ್ಲಿಸಿರುತ್ತಾರೆ.

ಚುನಾವಣೆ ನಡೆಯುವ ಸಮಯದಲ್ಲಿ ಕಿಡಿಗೇಡಿಗಳು ಮದ್ಯಪಾನದ ಅಮಲಿನಲ್ಲಿ ದುಷ್ಕೃತ್ಯವನ್ನು ನಡೆಸಿ ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಹಾಳು ಮಾಡುವ ಸಂಭವವಿರುವುದಾಗಿ ಗುಪ್ತವಾರ್ತಾ ವಿಭಾಗದ ಮಾಹಿತಿಯಿಂದಲೂ ಸಹ ತಿಳಿದುಬಂದಿರುತ್ತದೆ.

ಇದಲ್ಲದೇ, ನಾನು ಸ್ವತಃ ಪರಿಶೀಲಿಸಲಾಗಿ ಮತ್ತು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದುಬಂದಿದೆ. ಮತದಾನ ನಡೆಯುವ ಸಮಯದಲ್ಲಿ ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ತಡೆಯುವ ಉದ್ದೇಶದಿಂದ ಮತ್ತು ಈ ಸಂದರ್ಭದಲ್ಲಿ ಕಾನೂನು & ಸುವ್ಯವಸ್ಥೆಗೆ ಭಂಗವುಂಟಾಗಿ

ಸಾರ್ವಜನಿಕ ಮತ್ತು ಖಾಸಗಿ ಆಸ್ತಿ–ಪಾಸ್ತಿಗಳಿಗೆ ನಷ್ಟವುಂಟುಮಾಡುವ ಘಟನೆಗಳನ್ನು ತಡೆಯುವ ಅವಶ್ಯಕತೆ ಇರುವುದರಿಂದಲೂ, ಮುಂಜಾಗ್ರತಾ ಕ್ರಮವಾಗಿ ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿ ಬರುವ ಈಶಾನ್ಯ ವಿಭಾಗದ ಚಿಕ್ಕಜಾಲ ಪೊಲೀಸ್ ಠಾಣೆ ಮತ್ತು ಬಾಗಲೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಾರ್‌ಗಳು, ವೈನ್ಸ್‌ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇದಿಸುವಂತೆ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಎಸ್‌ಬಿ/ಚುನಾವಣಾ ಮದ್ಯ ಮಾರಾಟ ನಿಷೇದಾಜ್ಞೆ/28/2016 ದಿನಾಂಕ: 16–11–2016**

ಈ ದೆಸೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು, ಭಾರತೀಯ ದಂಡ ಪ್ರಕ್ರಿಯ ಸಂಹಿತೆಯ ಕಲಂ 144 ಉಪ ಕಲಂ (1) ಮತ್ತು (3) ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ಎನ್.ಎಸ್.ಮೇಘರಿಖ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು, ದಿನಾಂಕ: 19.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ ದಿನಾಂಕ: 21.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯ ಈಶಾನ್ಯ ವಿಭಾಗದ ಚಿಕ್ಕಜಾಲ ಪೊಲೀಸ್ ಠಾಣೆ ಮತ್ತು ಬಾಗಲೂರು ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಎಲ್ಲಾ ಬಾರ್‌ಗಳು, ವೈನ್ಸ್‌ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟ ಮಾಡದಿರಲು ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ. ಈ ಕೆಳಗಿನವುಗಳನ್ನು ಪ್ರತಿಬಂಧಕಾಜ್ಞೆಯಿಂದ ಹೊರತುಪಡಿಸಲಾಗಿದೆ–

- **CL-4- ಕ್ಲಬ್ಬುಗಳು**
- **CL-6A- ಸ್ಟಾರ್ ಹೋಟೆಲ್‌ಗಳು**
- **CL-8-** ಮಿಲಿಟರಿ ಕ್ಯಾಂಟೀನ್‌ಗಳು

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ನವೆಂಬರ್ ಮಾಹೆಯ ದಿನಾಂಕ 16 ರಂದು ಹೊರಡಿಸಿರುತ್ತೇನೆ.

**ಎನ್.ಎಸ್.ಮೇಘರಿಖ್**
ಪೊಲೀಸ್ ಆಯುಕ್ತರು
ಬೆಂಗಳೂರು ನಗರ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪ್ರಿ7) ಪ್ರತಿಗಳು:

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I<br>Part–I | ಬೆಂಗಳೂರು, ಶುಕ್ರವಾರ, ನವೆಂಬರ್ ೧೮, ೨೦೧೬ (ಕಾರ್ತೀಕ ೨೭, ಶಕ ವರ್ಷ ೧೯೩೮)<br>Bengaluru, Friday, November 18, 2016 (Karthika 27, Shaka Varsha 1938) | ನಂ. ೧೨೭೯<br>No. 1279 |
|---|---|---|

### ಪೊಲೀಸ್ ಆಯುಕ್ತರು ಹಾಗೂ ಜಿಲ್ಲಾ ದಂಡಾಧಿಕಾರಿಗಳು, ಬೆಂಗಳೂರು ನಗರ ರವರ ನಡವಳಿಗಳು

**ಉಪಸ್ಥಿತರು** : ಎನ್.ಎಸ್.ಮೇಘರಿಖ್, ಐ.ಪಿ.ಎಸ್, ಪೊಲೀಸ್ ಆಯುಕ್ತರು, ಬೆಂಗಳೂರು ನಗರ.

**ವಿಷಯ** : ದಿನಾಂಕ: 19.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ ದಿನಾಂಕ:21.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ಮತ್ತು ದಿನಾಂಕ: 23.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ 24.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ದಕ್ಷಿಣ ವಿಭಾಗದ ಆಡುಗೋಡಿ ಪೊಲೀಸ್ ಠಾಣೆ ಠಾಣಾ ವ್ಯಾಪ್ತಿಯಲ್ಲಿ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮದ್ಯ ಮಾರಾಟವನ್ನು ನಿಷೇಧಿಸುವ ಬಗ್ಗೆ

**ಉಲ್ಲೇಖ** : 1. ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರ ಕಛೇರಿಯ ಪತ್ರ ಸಂಖ್ಯೆ:ಎಂಎಜಿ(4)/ಮಿಸ್/ಸಿಆರ್/143/2016–17, ದಿನಾಂಕ: 15.11.2016

– – – –

**ಪ್ರಸ್ತಾವನೆ :**

ರಾಜ್ಯ ಚುನಾವಣಾ ಆಯೋಗವು ಬೆಂಗಳೂರು ಬೃಹತ್ ಮಹಾನಗರ ಪಾಲಿಕೆ ವಾರ್ಡ್ ನಂ–146, ಲಕ್ಕಸಂದ್ರ ವಾರ್ಡ್‌ನ ಉಪ ಚುನಾವಣೆಯನ್ನು ದಿನಾಂಕ: 20.11.2016 ರಂದು ನಡೆಸಲು ಹಾಗೂ ಮತ ಎಣಿಕೆ ಕಾರ್ಯವನ್ನು ದಿನಾಂಕ: 23.11.2016 ರಂದು ನಡೆಸಲು ದಿನಾಂಕಗಳನ್ನು ನಿಗಧಿಪಡಿಸಿರುತ್ತದೆ. ಈ ಉಪ ಚುನಾವಣೆ ಹಿನ್ನೆಲೆಯಲ್ಲಿ ಮತದಾನ ಹಾಗೂ ಮತ ಎಣಿಕೆ ಪ್ರಕ್ರಿಯೆಯು ಶಾಂತವಾಗಿ ಮತ್ತು ಮುಕ್ತವಾಗಿ ನಡೆಯುವಂತಾಗಲು ಚುನಾವಣಾ ಕ್ಷೇತ್ರ ವ್ಯಾಪ್ತಿಯಲ್ಲಿ ಮದ್ಯ ಮಾರಾಟವನ್ನು ನಿಷೇಧಿಸುವಂತೆ ಮೇಲಿನ ಉಲ್ಲೇಖಿತ ಪತ್ರದನ್ವಯ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ರವರು ಈ ಕಛೇರಿಗೆ ಕೋರಿಕೆ ಸಲ್ಲಿಸಿರುತ್ತಾರೆ.

ಚುನಾವಣೆ ನಡೆಯುವ ಸಮಯದಲ್ಲಿ ಕಿಡಿಗೇಡಿಗಳು ಮದ್ಯಪಾನದ ಅಮಲಿನಲ್ಲಿ ದುಷ್ಕೃತ್ಯವನ್ನು ನಡೆಸಿ ಸಮಾಜದ ಶಾಂತಿ ಮತ್ತು ಸುವ್ಯವಸ್ಥೆಯನ್ನು ಹಾಳು ಮಾಡುವ ಸಂಭವವಿರುವುದಾಗಿ ಗುಪ್ತವಾರ್ತಾ ವಿಭಾಗದ ಮಾಹಿತಿಯಿಂದ ತಿಳಿದುಬಂದಿರುತ್ತದೆ.

ಇದಲ್ಲದೇ, ನಾನು ಸ್ವತಃ ಪರಿಶೀಲಿಸಲಾಗಿ ಮತ್ತು ಈ ಮೇಲ್ಕಂಡ ಮಾಹಿತಿಗಳ ಬಗ್ಗೆ ಖುದ್ದಾಗಿ ಮಾಡಿದ ವಿಚಾರಣೆಯಿಂದ ಸಾಕಷ್ಟು ಸತ್ಯಾಂಶವಿದೆಯೆಂದು ತಿಳಿದುಬಂದಿದೆ. ಮತದಾನ ಹಾಗೂ ಮತ ಎಣಿಕೆ ನಡೆಯುವ ಸಮಯದಲ್ಲಿ ಯಾವುದೇ ಅಹಿತಕರ ಘಟನೆಗಳು ನಡೆಯದಂತೆ ತಡೆಯುವ ಉದ್ದೇಶದಿಂದ ಮತ್ತು ಈ ಸಂದರ್ಭದಲ್ಲಿ ಕಾನೂನು & ಸುವ್ಯವಸ್ಥೆಗೆ ಭಂಗವುಂಟಾಗಿ ಸಾರ್ವಜನಿಕ ಮತ್ತು ಖಾಸಗಿ ಆಸ್ತಿ–ಪಾಸ್ತಿಗಳಿಗೆ ನಷ್ಟವುಂಟುಮಾಡುವ ಘಟನೆಗಳನ್ನು ತಡೆಯುವ ಅವಶ್ಯಕತೆ ಇರುವುದರಿಂದಲೂ, ಮುಂಜಾಗ್ರತಾ ಕ್ರಮವಾಗಿ ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿ ಬರುವ

ದಕ್ಷಿಣ ವಿಭಾಗದ ಆಡುಗೋಡಿ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಬಾರ್‌ಗಳು, ವೈನ್ಸ್‌ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟವನ್ನು ನಿಷೇದಿಸುವಂತೆ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತೇನೆ.

**ಆದೇಶ ಸಂಖ್ಯೆ: ಎಸ್‌ಬಿ/ಚುನಾವಣಾ ಮದ್ಯ ಮಾರಾಟ ನಿಷೇದಾಜ್ಞೆ/29/2016 ದಿನಾಂಕ: 16–11–2016**

ಈ ದೆಸೆಯಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು, ಭಾರತೀಯ ದಂಡ ಪ್ರಕ್ರಿಯ ಸಂಹಿತೆಯ ಕಲಂ 144 ಉಪ ಕಲಂ (1) ಮತ್ತು (3) ರ ಅನ್ವಯ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿ ಎನ್.ಎಸ್.ಮೇಘರಿಖ್, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ ಆದ ನಾನು, ದಿನಾಂಕ: 19.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ ದಿನಾಂಕ: 21.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ಮತ್ತು ದಿನಾಂಕ: 23.11.2016 ರಂದು ಬೆಳಿಗ್ಗೆ 06.00 ಗಂಟೆಯಿಂದ 24.11.2016 ರ ಬೆಳಿಗ್ಗೆ 06.00 ಗಂಟೆಯವರೆಗೆ ಬೆಂಗಳೂರು ನಗರ ಪೊಲೀಸ್ ಕಮೀಷನರೇಟ್ ವ್ಯಾಪ್ತಿಯಲ್ಲಿ ಬರುವ ದಕ್ಷಿಣ ವಿಭಾಗದ ಆಡುಗೋಡಿ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿ ಎಲ್ಲಾ ಬಾರ್‌ಗಳು, ವೈನ್ಸ್‌ಷಾಪ್‌ಗಳು, ಪಬ್‌ಗಳು ಹಾಗೂ ಎಲ್ಲಾ ರೀತಿಯ ಮದ್ಯ ಮಾರಾಟ ಮಾಡುವ ಅಂಗಡಿಗಳನ್ನು ಮುಚ್ಚಲು ಹಾಗೂ ಮಾರಾಟ ಮಾಡದಿರಲು ಪ್ರತಿಬಂಧಕಾಜ್ಞೆಯನ್ನು ವಿಧಿಸಿರುತ್ತೇನೆ. ಈ ಕೆಳಗಿನವುಗಳನ್ನು ಪ್ರತಿಬಂಧಕಾಜ್ಞೆಯಿಂದ ಹೊರತುಪಡಿಸಲಾಗಿದೆ–

- **CL-4- ಕ್ಲಬ್ಬುಗಳು**
- **CL-6A- ಸ್ಟಾರ್ ಹೋಟೆಲ್‌ಗಳು**
- **CL-8- ಮಿಲಿಟರಿ ಕ್ಯಾಂಟೀನ್‌ಗಳು**

ಮೇಲ್ಕಂಡ ಆಜ್ಞೆಯನ್ನು ನನ್ನ ಸಹಿ ಮತ್ತು ನನ್ನ ಕಛೇರಿಯ ಮೊಹರಿನಲ್ಲಿ 2016ರ ನವೆಂಬರ್ ಮಾಹೆಯ ದಿನಾಂಕ 16 ರಂದು ಹೊರಡಿಸಿರುತ್ತೇನೆ.

**ಎನ್.ಎಸ್.ಮೇಘರಿಖ್**
ಪೊಲೀಸ್ ಆಯುಕ್ತರು
ಬೆಂಗಳೂರು ನಗರ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I<br>Part–I | ಬೆಂಗಳೂರು, ಶನಿವಾರ, ನವೆಂಬರ್ ೧೯, ೨೦೧೬ (ಕಾರ್ತೀಕ ೨೮, ಶಕ ವರ್ಷ ೧೯೩೮)<br>Bengaluru, Saturday, November 19, 2016 (Karthika 28, Shaka Varsha 1938) | ನಂ. ೧೨೮೭<br>No. 1287 |
|---|---|---|

### ಕರ್ನಾಟಕ ಸರ್ಕಾರದ ನಡವಳಿಗಳು

### ಸಂಸದೀಯ ವ್ಯವಹಾರಗಳ ಸಚಿವಾಲಯ

**ವಿಷಯ:** ವಸತಿ ಸಚಿವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ರಾಜು ಅಲಗೂರ ರವರು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ರಾಜೀನಾಮೆ ನೀಡಿರುವ ಕುರಿತು.

**ಓದಲಾಗಿದೆ:** ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 17 ಸಂವ್ಯವಿ 2015, ದಿನಾಂಕ: 07.11.2015.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಸೂಚನೆಯಲ್ಲಿ Karnataka Parliamentary Secretaries Salary, Allowances and Miscellaneous Provisions Act, 1963ರ ಪ್ರಕರಣ 2 ರ ಖಂಡ (ಎ) ರನ್ವಯ ಮಾನ್ಯ ವಸತಿ ಸಚಿವರ ಸಂಸದೀಯ ಕಾರ್ಯದರ್ಶಿಯವರನ್ನಾಗಿ ವಿಧಾನಸಭಾ ಸದಸ್ಯರಾದ ಶ್ರೀ ರಾಜು ಅಲಗೂರ ಇವರನ್ನು ನೇಮಿಸಲಾಗಿರುತ್ತದೆ.

ಸದರಿಯವರು ದಿನಾಂಕ: 02.11.2016 ರಂದು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ರಾಜೀನಾಮೆ ಸಲ್ಲಿಸಿರುತ್ತಾರೆ. ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 18.11.2016 ರಂದು ಅಂಗೀಕರಿಸಿರುತ್ತಾರೆ.

ಆದುದರಿಂದ, ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 19 ಸಂವ್ಯವಿ 2016, ದಿನಾಂಕ: 19.11.2016**

ಮಾನ್ಯ ವಸತಿ ಸಚಿವರ ಸಂಸದೀಯ ಕಾರ್ಯದರ್ಶಿಯವರಾದ ಶ್ರೀ ರಾಜು ಅಲಗೂರ ರವರು ದಿನಾಂಕ: 02.11.2016 ರಂದು ಸಂಸದೀಯ ಕಾರ್ಯದರ್ಶಿ ಹುದ್ದೆಗೆ ಸಲ್ಲಿಸಿರುವ ರಾಜೀನಾಮೆಯನ್ನು ದಿನಾಂಕ: 18.11.2016 ರಂದು ಅಂಗೀಕರಿಸಲಾಗಿದೆ.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಯವರ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಶನಿವಾರ, ನವೆಂಬರ್ ೧೯, ೨೦೧೬ (ಕಾರ್ತೀಕ ೨೮, ಶಕ ವರ್ಷ ೧೯೩೮) | ನಂ. ೧೨೮೮ |
|---|---|---|
| Part–I | Bengaluru, Saturday, November 19, 2016 (Karthika 28, Shaka Varsha 1938) | No. 1288 |

## ನಗರಾಭಿವೃದ್ಧಿ ಸಚಿವಾಲಯ

**ಸಂಖ್ಯೆ: ನಅಇ 318 ಜಿಇಎಲ್ 2016, ಬೆಂಗಳೂರು, ದಿನಾಂಕ: 19.11.2016.**

**ಸುತ್ತೋಲೆ**

ಸರ್ಕಾರದ ಸುತ್ತೋಲೆ ಸಂಖ್ಯೆ: ಹೆಚ್‌ಯುಡಿ 2261 ಜಿಇಇ 1990, ದಿನಾಂಕ: 16.11.1990ರ ಸುತ್ತೋಲೆಯಲ್ಲಿ ಪ್ರತಿವರ್ಷ ನವೆಂಬರ್ 25 ರಂದು ಸೈಂಟ್ ಟಿ.ಎಲ್.ವಾಸ್‌ವಾನಿ ರವರ ಜನ್ಮದಿನದ ಪ್ರಯುಕ್ತ ರಾಜ್ಯಾದ್ಯಂತ ಮಾಂಸರಹಿತ ದಿನವೆಂದು ಶಾಶ್ವತವಾಗಿ ಘೋಷಿಸಲಾಗಿರುತ್ತದೆ. ಮುಂದುವರೆದು, **2016ನೇ ಸಾಲಿಗೆ ಸೈಂಟ್ ಟಿ.ಎಲ್.ವಾಸ್‌ವಾನಿ ರವರ ಜನ್ಮದಿನವಾದ ನವೆಂಬರ್ 25 ರಂದು ರಾಜ್ಯಾದ್ಯಂತ ಮಾಂಸರಹಿತ ದಿನವೆಂದು ಘೋಷಿಸಿದೆ.**

**ಈ. ಶಿವರುದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ (ಎಂ.ಎ–2)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೧೬ (ಮಾರ್ಗಶಿರ ೩, ಶಕ ವರ್ಷ ೧೯೩೮) | ನಂ. ೧೩೦೧ |
|---|---|---|
| Part–I | Bengaluru, Thursday November 24, 2016 (Margashira 3, Shaka Varsha 1938) | No. 1301 |


### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರಡಿ ರಾಜ್ಯ ಸಿವಿಲ್ ಸೇವೆಯಲ್ಲಿ ವಿಕಲಚೇತನರಿಗೆ ಮೀಸಲಿರಿಸಿರುವ ರಿಕ್ತಸ್ಥಾನಗಳಲ್ಲಿ ನಿಗದಿತ ಅಂಗವೈಕಲ್ಯತೆ ಹೊಂದಿದ ಅಭ್ಯರ್ಥಿ ಲಭ್ಯವಿಲ್ಲದೇ ಭರ್ತಿಯಾಗದ ರಿಕ್ತ ಸ್ಥಾನವನ್ನು ಮುಂದಿನ ನೇಮಕಾತಿಗೆ ಪರಿಗಣಿಸುವ ಬಗ್ಗೆ.

**ಪ್ರಸ್ತಾವನೆ:**

ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಸೆಕ್ಷನ್ 36ರಲ್ಲಿ ವಿಕಲಚೇತನರಿಗಾಗಿ ಗುರುತಿಸಿ ಅಧಿಸೂಚಿಸಿದ ಹುದ್ದೆಗಳ ರಿಕ್ತ ಸ್ಥಾನಗಳಲ್ಲಿ ಅಧಿಸೂಚಿತ ಅಂಗವಿಕಲತೆ ಹೊಂದಿರುವ ಅಭ್ಯರ್ಥಿ ಲಭ್ಯವಿಲ್ಲದೆ ಇದ್ದಲ್ಲಿ ಅಂತಹ ರಿಕ್ತ ಸ್ಥಾನವನ್ನು ಮುಂದಿನ ನೇಮಕಾತಿಗೆ ಮುಂದಕ್ಕೊಯ್ಯಲು ಅವಕಾಶ ಕಲ್ಪಿಸಲಾಗಿರುತ್ತದೆ. ಈ ಅವಕಾಶವನ್ನು ರಾಜ್ಯ ಸಿವಿಲ್ ಸೇವಾ ಹುದ್ದೆಗಳ ನೇರನೇಮಕಾತಿಯಲ್ಲಿ ಪರಿಗಣಿಸುವಂತೆ ನ್ಯಾಷನಲ್ ಫೆಡರೇಷನ್ ಆಫ್ ದಿ ಬ್ಲೈಂಡ್ ಸಂಸ್ಥೆಯು 2012 ರಿಂದ ಹಲವು ಬಾರಿ ರಾಜ್ಯ ಸರ್ಕಾರಕ್ಕೆ ಸಲ್ಲಿಸಿರುವ ಮನವಿಗಳನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಸಿಆಸುಇ 235 ಸೇನೆನಿ 2012, ಬೆಂಗಳೂರು, ದಿನಾಂಕ: 22/11/2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯ ಸಿವಿಲ್ ಸೇವಾ ಹುದ್ದೆಗಳ ನೇರ ನೇಮಕಾತಿಯಲ್ಲಿ ವಿಕಲಚೇತನರಿಗಾಗಿ ಗುರುತಿಸಿ ಅಧಿಸೂಚಿಸಿದ ರಿಕ್ತ ಸ್ಥಾನಗಳನ್ನು ಅಂಗವಿಕಲ ವ್ಯಕ್ತಿಗಳ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ಭಾಗವಹಿಸುವಿಕೆ) ಅಧಿನಿಯಮ 1995ರ ಸೆಕ್ಷನ್ 36ರನ್ವಯ ಆ ನೇಮಕಾತಿಯಲ್ಲಿ ಅಧಿಸೂಚಿಸಿರುವ ಅಂಗವೈಕಲ್ಯ ಹೊಂದಿದ ಅಭ್ಯರ್ಥಿಯಿಂದಲೇ ಭರ್ತಿ ಮಾಡಬೇಕಾಗಿರುತ್ತದೆ.

ಒಂದು ವೇಳೆ ಅಧಿಸೂಚಿಸಿರುವ ಅಂಗವಿಕಲತೆ ಹೊಂದಿರುವ ಅಭ್ಯರ್ಥಿ ಲಭ್ಯವಿಲ್ಲದೇ ಇದ್ದಲ್ಲಿ ಅಂತಹ ರಿಕ್ತ ಸ್ಥಾನವನ್ನು ಮುಂದಿನ ನೇಮಕಾತಿಗೆ ಮುಂದಕ್ಕೊಯ್ಯತಕ್ಕದ್ದು (Carry forward). ಮುಂದಿನ ನೇಮಕಾತಿಯಲ್ಲಿಯೂ ಅಧಿಸೂಚಿತ ಅಂಗವಿಕಲತೆ ಹೊಂದಿರುವ ಅಭ್ಯರ್ಥಿ ಲಭ್ಯವಿಲ್ಲದೇ ಇದ್ದಲ್ಲಿ, ನೇರ ಮೀಸಲಾತಿಯಡಿ ಬರುವ ಆಯಾ ಪ್ರವರ್ಗದ ಇತರ ಅಂಗವಿಕಲತೆಯುಳ್ಳ ಅರ್ಹ ವಿಕಲಚೇತನ ಅಭ್ಯರ್ಥಿಯಿಂದ ಭರ್ತಿ ಮಾಡತಕ್ಕದ್ದು. ಒಂದು ವೇಳೆ ಯಾವುದೇ ವಿಕಲಚೇತನ ಅಭ್ಯರ್ಥಿ ಲಭ್ಯವಿಲ್ಲದಿದ್ದಲ್ಲಿ, ಆಯಾ ಪ್ರವರ್ಗದ ಇತರೆ ಅರ್ಹ ಅಭ್ಯರ್ಥಿಯಿಂದ ಭರ್ತಿ ಮಾಡಿಕೊಳ್ಳತಕ್ಕದ್ದೆಂದು ಎಲ್ಲಾ ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

ಈ ಆದೇಶದಲ್ಲಿನ ಸೂಚನೆಗಳನ್ನು ಈ ಆದೇಶದ ದಿನಾಂಕದ ನಂತರ ಮಾಡುವ ಎಲ್ಲಾ ನೇರ ನೇಮಕಾತಿ ಅಧಿಸೂಚನೆಗಳಲ್ಲಿ ಅಳವಡಿಸಿಕೊಂಡು ನೇಮಕಾತಿ ಪ್ರಕ್ರಿಯೆ ಕೈಗೊಳ್ಳಲು ಎಲ್ಲಾ ನೇಮಕಾತಿ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗಾಯತ್ರಿ ಎಂ.ಆರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೧೬ (ಮಾರ್ಗಶಿರ ೩, ಶಕ ವರ್ಷ ೧೯೩೮) | ನಂ. ೧೩೦೩ |
|---|---|---|
| Part–I | Bengaluru, Thursday, November 24, 2016 (Margashira 3, Shaka Varsha 1938) | No. 1303 |



### ಕರ್ನಾಟಕ ಸರ್ಕಾರದ ನಡವಳಿಗಳು

### ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ**: ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ವಿತರಿಸಲಾಗುತ್ತಿರುವ ಸಹಾಯಧನಯುಕ್ತ ಸೀಮೆಎಣ್ಣೆ ಚಿಲ್ಲರೆ ಮಾರಾಟ ದರ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ:ಎಫ್‌ಸಿಎಸ್ 112 ಡಿಆರ್‌ಎ 2011 ದಿ:05.12.2012.

**2.** ಸರ್ಕಾರದ ಪತ್ರ ಸಂಖ್ಯೆ:ಎಫ್‌ಸಿಎಸ್ 82 ಡಿಆರ್‌ಎ 2014 ದಿ:05.08.2014.

3. ಸರ್ಕಾರದ ಆದೇಶ ಸಂಖ್ಯೆ:ಆನಾಸ 82 ಡಿಆರ್‌ಎ 2014 ದಿನಾಂಕ:23.09.2016

4. ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ರವರ ಕಛೇರಿಯ ಪತ್ರ ಸಂ:ಸಿಎಫ್‌ಎಸ್/ಪಿಡಿ/II/ಸೀಎದಪ/2011–12, ದಿನಾಂಕ:04.11.2016.

****

ಮೇಲೆ ಓದಲಾದ ಕ್ರಮಾಂಕ(1)ರ ಪತ್ರದಲ್ಲಿ ಸಬ್ಸಿಡಿಯುಕ್ತ ಸೀಮೆಎಣ್ಣೆ ಸಗಟು ಸಾಗಾಣಿಕ ದರಗಳನ್ನು ಹಾಗೂ ಓದಲಾದ ಕ್ರಮಾಂಕ (2)ರ ಪತ್ರದಲ್ಲಿ ಚಿಲ್ಲರೆ ಮಾರಾಟ ಲಾಭಾಂಶವನ್ನು ಹೆಚ್ಚಿಸಿ ಆದೇಶಿಸಲಾಗಿರುತ್ತದೆ;

ಮೇಲೆ ಓದಲಾದ ಕ್ರಮಾಂಕ(3)ರ ಸರ್ಕಾರದ ಆದೇಶದಲ್ಲಿ ಸಾರ್ವಜನಿಕ ವಿತರಣಾ ಪದ್ದತಿಯಡಿ ವಿತರಿಸುತ್ತಿರುವ ಸಬ್ಸಿಡಿಯುಕ್ತ ಸೀಮೆಎಣ್ಣೆಯ ಪ್ರಸ್ತುತ ದರವಾದ ಪ್ರತಿ ಲೀಟರಿಗೆ ರೂ.18/–ರಿಂದ ರೂ.20/–ಕ್ಕೆ ಹೆಚ್ಚಿಸಿ ನಿಗದಿಪಡಿಸಿದೆ. ಚಿಲ್ಲರೆ ಮಾರಾಟಗಾರರಿಗೆ ಪ್ರಸ್ತುತ ಪ್ರತಿ ಲೀಟರಿಗೆ ಇರುವ ಲಾಭಾಂಶವನ್ನು ರೂ.0.75/– ರಿಂದ ರೂ.1.125ಗೆ ಹೆಚ್ಚಿಸಿದೆ ಹಾಗೂ ಸಾರ್ವಜನಿಕ ವಿತರಣಾ ಪದ್ದತಿಯಡಿ ವಿತರಿಸುತ್ತಿರುವ ಸಹಾಯಧನಯುಕ್ತ ಸೀಮೆಎಣ್ಣೆಯ ಸಾಗಾಣಿಕ ದರಗಳನ್ನು ಸಹ ಪರಿಷ್ಕರಿಸಿ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ (4)ರ ಪತ್ರದಲ್ಲಿ ತೈಲ ಕಂಪನಿಗಳ ಮೂಲಕ ರಾಜ್ಯಕ್ಕೆ ಹಂಚಿಕೆ ಮಾಡುತ್ತಿರುವ ಸಾರ್ವಜನಿಕ ವಿತರಣಾ ಪದ್ಧತಿಯಡಿಯ ಸಹಾಯಧನಯುಕ್ತ ಸೀಮೆಎಣ್ಣೆಯ ಟರ್ಮಿನಲ್ ದರಗಳನ್ನು ಜುಲೈ 2016ರಿಂದ ಪ್ರತಿ ಕೆ.ಎಲ್.ಗೆ ರೂ.250–00ರಂತೆ ಹೆಚ್ಚಿಸಿ ಪ್ರತಿ ಮಾಹೆ ಎರಡೆರಡು ಬಾರಿ ಟರ್ಮಿನಲ್ ದರಗಳನ್ನು ಪರಿಷ್ಕರಿಸುತ್ತಾ ಬರುತ್ತಿರುವುದಾಗಿ ಹಾಗೂ ಇದೇ ರೀತಿ ಮುಂದಿನ ಮಾರ್ಚ್ 2017ರ ವರೆಗೂ ಪರಿಷ್ಕರಣೆಯಾಗಲಿರುವುದಾಗಿ ತಿಳಿಸಿರುತ್ತಾರೆ. ಮುಂದುವರೆದಂತೆ, ಭಾರತೀಯ ತೈಲ ನಿಗಮವು ಪ್ರತಿ ಮಾಹೆ ಎರಡೆರಡು ಬಾರಿ ಟರ್ಮಿನಲ್ ದರವನ್ನು ಮುಂದಿನ ಮಾರ್ಚ್‌ವರೆಗೆ ಪರಿಷ್ಕರಿಸಿದಲ್ಲಿ ಹಾಗೂ ಈಗಿರುವಂತೆ ಚಿಲ್ಲರೆ ವಿತರಣಾ ದರವನ್ನು ಪ್ರತಿ ಲೀಟರ್‌ಗೆ ರೂ.20/–ರಂತೆಯೇ ಅನ್ವಯಿಸಿಕೊಂಡು ರಚಿಸಿರುವ ದಿನಾಂಕ:16.10.2016ರ ಪರಿಷ್ಕೃತ ದರ ಪಟ್ಟಿಯಲ್ಲಿ ಬೆಳಗಾವಿ, ಬಳ್ಳಾರಿ, ಚಿತ್ರದುರ್ಗ, ರಾಯಚೂರು, ದಾವಣಗೆರೆ ಮತ್ತು ಧಾರವಾಡ ಜಿಲ್ಲೆಗಳಲ್ಲಿ ಸೀಮೆಎಣ್ಣೆ ದುಂಡಂಕಿ (Rounded off amount) ಮೊತ್ತದಲ್ಲಿ ಋಣಾತ್ಮಕ ಮೊತ್ತವು ಕಂಡು ಬಂದಿರುವುದರಿಂದ ಅದನ್ನು ಸರಿದೂಗಿಸಲು ಸಮಸ್ಯೆಯಾಗುವುದರಿಂದ ಮತ್ತು ಮುಂದಿನ ದಿನಗಳಲ್ಲಿ ಈ ದುಂಡಂಕಿ ಮೊತ್ತದಲ್ಲಿ ಋಣಾತ್ಮಕ ಮೊತ್ತವು ಇತರೆ ಜಿಲ್ಲೆಗಳಲ್ಲಿಯೂ ಕಂಡುಬರುವ ಸಾಧ್ಯತೆಯಿರುವುದರಿಂದ, ತೈಲ ಕಂಪನಿಗಳ ದರದ ಪರಿಷ್ಕರಣೆ ಹಿನ್ನೆಲೆಯಲ್ಲಿ ಚಿಲ್ಲರೆ ಸೀಮೆಎಣ್ಣೆ ವಿತರಣಾ ದರವನ್ನು

ಪ್ರತಿ ಲೀಟರ್‌ಗೆ ರೂ.25/–ರಂತೆ ಪರಿಷ್ಕರಿಸುವುದು ಸೂಕ್ತವೆಂದು ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ ಇವರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 82 ಡಿಆರ್‌ಎ 2014, ಬೆಂಗಳೂರು, ದಿನಾಂಕ 23.11.2016**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ, ಸಾರ್ವಜನಿಕ ವಿತರಣಾ ಪದ್ದತಿಯಡಿ ವಿತರಿಸುತ್ತಿರುವ ಸಹಾಯಧನಯುಕ್ತ ಸೀಮೆಎಣ್ಣೆಯ ವಿತರಣಾ ದರವನ್ನು ಪ್ರತಿ ಲೀಟರಿಗೆ ರೂ.20/–ರಿಂದ ರೂ.25/–ಕ್ಕೆ ಪರಿಷ್ಕರಿಸಿ ಆದೇಶಿಸಿದೆ.

ಈ ಆದೇಶವು ಡಿಸೆಂಬರ್–2016ರ ಮಾಹೆಯಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ
ವ್ಯವಹಾರಗಳ ಮತ್ತು ಕಾನೂನು ಮಾಪನ ಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:-200

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೧೬ (ಮಾರ್ಗಶಿರ ೩, ಶಕ ವರ್ಷ ೧೯೩೮) | ನಂ. ೧೩೦೪ |
|---|---|---|
| Part–I | Bengaluru, Thursday, November 24, 2016 (Margashira 3, Shaka Varsha 1938) | No. 1304 |

## ಕರ್ನಾಟಕ ಸರ್ಕಾರದ ನಡವಳಿಗಳು

### ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ:** ಸಾರ್ವಜನಿಕ ವಿತರಣಾ ಪದ್ಧತಿಯಡಿ ಆದ್ಯತಾ ಕುಟುಂಬಗಳಿಗೆ (ಎಎವೈ ಮತ್ತು ಬಿಪಿಎಲ್) ರಿಯಾಯಿತಿ ದರದಲ್ಲಿ ತಾಳೆಎಣ್ಣೆ ಬದಲಾಗಿ ಸೂರ್ಯಕಾಂತಿ ಎಣ್ಣೆಯನ್ನು ವಿತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಆನಾಸ 204 ಡಿಆರ್‌ಎ 2015 ದಿನಾಂಕ: 07–04–2015

2) ಆಯುಕ್ತರ ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/1/1(8) ತಾ.ಎಣ್ಣೆ ಮತ್ತು ಉಪ್ಪು/2016–17 ದಿನಾಂಕ: 29/09/2016 ಮತ್ತು ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/1/1(10):2016–17, ದಿನಾಂಕ: 16/11/2016

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಅನ್ನಭಾಗ್ಯ ಯೋಜನೆಯಡಿ ರಾಜ್ಯದಲ್ಲಿ ಮೇ 2015ರ ಮಾಹೆಯಿಂದ ಆದ್ಯತಾ ಕುಟುಂಬಗಳಿಗೆ (ಎಎವೈ ಮತ್ತು ಬಿಪಿಎಲ್) ಪ್ರತಿ ಮಾಹೆ ರಿಯಾಯಿತಿ ದರದಲ್ಲಿ ಅಂದರೆ ಪ್ರತಿ ಲೀಟರ್‌ಗೆ ರೂ.25/– ರಂತೆ ಒಂದು ಲೀಟರ್ ತಾಳೆಎಣ್ಣೆಯನ್ನು ವಿತರಿಸಲಾಗುತ್ತಿದೆ. ಆದರೆ, ಕೆಲವು ಪಡಿತರ ಚೀಟಿದಾರರು ತಾಳೆಎಣ್ಣೆಯನ್ನು ಅಡುಗೆಗೆ ಬಳಸಲು ಇಚ್ಚಿಸದಿರುವುದು ಹಾಗೂ ಹೆಚ್ಚಿನ ಪಡಿತರ ಚೀಟಿದಾರರು ತಾಳೆಎಣ್ಣೆಯನ್ನು ಅಡಿಗೆಗೆ ಬದಲಾಗಿ ದೀಪ ಉರಿಸಲು ಬಳಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಅಲ್ಲದೆ, ಪಡಿತರ ಚೀಟಿದಾರರು ತಾಳೆಎಣ್ಣೆ ಬದಲಾಗಿ ಸೂರ್ಯಕಾಂತಿ ಎಣ್ಣೆಯನ್ನು ನೀಡುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಸರ್ಕಾರವು ಪಡಿತರ ಚೀಟಿದಾರರಿಗೆ ತಾಳೆ ಎಣ್ಣೆಯ ಬದಲು ಸೂರ್ಯಕಾಂತಿ ಎಣ್ಣೆಯನ್ನು ಪ್ರಾಯೋಗಿಕವಾಗಿ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಾರಿಗೊಳಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ: ಆನಾಸ 281 ಡಿಆರ್‌ಎ 2016 ಬೆಂಗಳೂರು, ದಿನಾಂಕ:24.11.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಅನ್ನಭಾಗ್ಯ ಯೋಜನೆಯಡಿ ಆದ್ಯತಾ ಕುಟುಂಬಗಳಿಗೆ (ಎಎವೈ ಮತ್ತು ಬಿಪಿಎಲ್) ಪ್ರತಿ ಮಾಹೆ ರಿಯಾಯಿತಿ ದರದಲ್ಲಿ ವಿತರಿಸುತ್ತಿರುವ 1 ಲೀಟರ್ ತಾಳೆಎಣ್ಣೆಯ ಬದಲಿಗೆ ಸೂರ್ಯಕಾಂತಿ ಎಣ್ಣೆಯನ್ನು ಪ್ರತಿ ಲೀಟರ್‌ಗೆ ರೂ. 40/– ರ ದರದಲ್ಲಿ ವಿತರಿಸಲು ಆದೇಶಿಸಿದೆ.

ಈ ಯೋಜನೆಯನ್ನು ಪ್ರಾಯೋಗಿಕವಾಗಿ ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಅನೌಪಚಾರಿಕ ಪಡಿತರ ಪ್ರದೇಶ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜನವರಿ–2017ರ ಮಾಹೆಯಿಂದ ಜಾರಿಗೊಳಿಸತಕ್ಕದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 807 ವೆಚ್ಚ–5/2016, ದಿನಾಂಕ: 17.09.2016ರ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:-200

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಗುರುವಾರ, ನವೆಂಬರ್ ೨೪, ೨೦೧೬ (ಮಾರ್ಗಶಿರ ೩, ಶಕ ವರ್ಷ ೧೯೩೮) | ನಂ. ೧೩೦೫ |
|---|---|---|
| **Part–I** | **Bengaluru, Thursday, November 24, 2016 (Margashira 3, Shaka Varsha 1938)** | **No. 1305** |

## ಕರ್ನಾಟಕ ಸರ್ಕಾರದ ನಡವಳಿಗಳು

## ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಮತ್ತು ಕಾನೂನು ಮಾಪನ ಶಾಸ್ತ್ರ ಸಚಿವಾಲಯ

**ವಿಷಯ:** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ದಾವಣಗೆರೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್‌ಎ 2013, ದಿನಾಂಕ: 30.05.2016.

2. ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ, ಇವರ ಪತ್ರ ಸಂ: ಆನಾಸ:2:ಸಿಆರ್:01 /2016–17 ದಿನಾಂಕ: 13.10.2016

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ 30.05.2016ರ ಆದೇಶದಲ್ಲಿ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS) ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಮೇಲೆ ಓದಲಾದ (1)ರ ಸರ್ಕಾರಿ ಆದೇಶದ ನಿಯಮಗಳನ್ವಯ ದಾವಣಗೆರೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಅರ್ಹ ಸದಸ್ಯರುಗಳ ನಾಮ ನಿರ್ದೇಶನ ಮಾಡಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ದಾವಣಗೆರೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 309 ಡಿಆರ್‌ಎ 2016, ಬೆಂಗಳೂರು, ದಿನಾಂಕ : 22.11.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ದಾವಣಗೆರೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | | |
|---|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – | ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – | ಉಪಾಧ್ಯಕ್ಷರು |
| 3. | ಮಹಾಪೌರರು, ದಾವಣಗೆರೆ ಮಹಾನಗರ ಪಾಲಿಕೆ | – | ಉಪಾಧ್ಯಕ್ಷರು |
| 4. | ಮಾನ್ಯ ಶಾಸಕರು, ಹೊನ್ನಾಳಿ ವಿಧಾನಸಭಾ ಕ್ಷೇತ್ರ | – | ಸದಸ್ಯರು |
| 5. | ಮಾನ್ಯ ಶಾಸಕರು, ಜಗಳೂರು ವಿಧಾನಸಭಾ ಕ್ಷೇತ್ರ | – | ಸದಸ್ಯರು |
| 6. | ಜಿಲ್ಲಾಧಿಕಾರಿಗಳು, ದಾವಣಗೆರೆ | – | ಸದಸ್ಯರು |

| | | | |
|---|---|---|---|
| 7. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – | ಸದಸ್ಯರು |
| 8. | a. ಶ್ರೀಮತಿ ಸುಚಿತ್ರ ಕೋಂ ಜಿ.ವಿ ತ್ಯಾಗರಾಜ ಗೌರಮ್ಮನ ಹಳ್ಳಿ, ಜಗಳೂರು ತಾಲ್ಲೂಕು, | – | ಅಧಿಕಾರೇತರ ಸದಸ್ಯರು |
| | b. ಶ್ರೀಮತಿ ನಾಜಿಮಬಾನು ಕೋಂ ಬಾಬಜಾನ್, ಚೀಲೂರು, ಹೊನ್ನಾಳಿ ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| | c. ಶ್ರೀಮತಿ ಬಿ. ಹಾಲಮ್ಮ ಕೋಂ ಪದ್ಮನಾಭ, ಕೆ.ಚ್.ಬಿ ಕಾಲೋನಿ, ಕೊಟ್ಟೂರು ರಸ್ತೆ, ಹರಪನಹಳ್ಳಿ ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| 9. | a. ಸುಮ ತಾಯಿ ಕೊರವರ ಗಿರಿಜಮ್ಮ, ದುಗ್ಗಾವತಿ, ಹರಪನಹಳ್ಳಿ, ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| | b. ಸೂರಮ್ಮ ಬಿನ್ ಪಿ.ಬಿ. ಚಂದ್ರಪ್ಪ, ಬೈಯಣ್ಣ ಕಾಮಗೇತನಹಳ್ಳಿ, ಜಗಳೂರು ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| | c. ಕುಮಾರಿ ರೋಜಾ ತಂದೆ ರಾಜಪ್ಪ, ಚಿಕ್ಕಬಾಸೂರು ಗ್ರಾಮ, ಹೊನ್ನಾಳಿ ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| 10. | a. ಶ್ರೀಮತಿ ಗಂಗಮ್ಮ ಮಹಂತೇಶ, ವಿದ್ಯಾನಗರ, ಹರಿಹರ | – | ಅಧಿಕಾರೇತರ ಸದಸ್ಯರು |
| | b. ಶ್ರೀಮತಿ ರೇಣುಕಮ್ಮ ಕೋಂ ರಾಜಪ್ಪ, ಅಮೃತನಗರ, ದಾವಣಗೆರೆ ತಾಲ್ಲೂಕು | | ಅಧಿಕಾರೇತರ ಸದಸ್ಯರು |
| | c. ಶ್ರೀ ಎಸ್.ಬಿ ಬಂಡೇಶ್ ಬಿನ್ ಕರಿಯಪ್ಪ, ಕಡತಿ ಗ್ರಾಮ, ಹರಪ್ಪನಹಳ್ಳಿ ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| | d. ಶ್ರೀ ಎಸ್.ಬಿ.ವಿಜಯಕುಮಾರ್ ಬಿನ್ ಪುಟ್ಟಪ್ಪ, ವಡ್ನಾಳ್ ಗ್ರಾಮ, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | – | ಅಧಿಕಾರೇತರ ಸದಸ್ಯರು |
| | e. ಶ್ರೀ ಸಿದ್ದಪ್ಪ ಬಿನ್ ಎನ್.ಡಿ ಮಹೇಶ್ವರಪ್ಪ, ನಾಗನೂರು ಗ್ರಾಮ, ದಾವಣಗೆರೆ ತಾಲ್ಲೂಕು | – | ಅಧಿಕಾರೇತರ ಸದಸ್ಯರು |
| 11. | ಉಪ ನಿರ್ದೇಶಕರು, ಆನಾಸ ಇಲಾಖೆ, ದಾವಣಗೆರೆ | – | ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ off take ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಟಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

**i.** ಜಾಗೃತ ಸಮಿತಿಯು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

**ii.** ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ

**iii.** ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ.

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:-200**

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ-III | ಬೆಂಗಳೂರು, ಗುರುವಾರ, ನವೆಂಬರ್ ೧೦, ೨೦೧೬ (ಕಾರ್ತೀಕ ೧೯, ಶಕ ವರ್ಷ ೧೯೩೮) | ನಂ. ೧೨೬೧ |
|---|---|---|
| Part-III | Bengaluru, Thursday, November 10, 2016 (Karthika 19, Shaka Varsha 1938) | No. 1261 |

**URBAN DEVELOPMENT SECRETARIAT**

**NOTIFICATION**

**No. UDD 76 MLR 2016, Bengaluru, Dated:10th November 2016.**

Government hereby allots the offices of the Mayor and Deputy Mayor to various categories for the NINTEENTH ($19^{th}$) TERM in respect of the following CORPORATIONS. Under Rule 73-A of the Karnataka Municipal Corporations (Election)(Amendment) Rules 2014 and Guidelines issued vide Order No. UDD 92 MLR 2014, dated 27.08.2014.

| Sl. No. | Name of the City Corporation | Mayor | Deputy Mayor |
|---|---|---|---|
| 1 | Ballari | G | G(W) |
| 2 | Belagavi | BCA(W) | G |
| 3 | Bengaluru | G(W) | G |
| 4 | Davanagere | BCB(W) | G |
| 5 | Hubballi-Dharwad | BCA | SC(W) |
| 6 | Kalaburagi | G | G(W) |
| 7 | Mangaluru | G(W) | SC |
| 8 | Mysuru | G | G(W) |
| 9 | Shivamogga | SC | ST(W) |
| 10 | Tumakuru | ST | BCA(W) |
| 11 | Vijayapura | SC(W) | BCA |

By order and in the name of the Governor of Karnataka,

**K.L. Bagalawade**
Under Secretary to Government,
Urban Development Department.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 100

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–III<br>Part–III | ಬೆಂಗಳೂರು, ಶುಕ್ರವಾರ, ನವೆಂಬರ್ ೧೧, ೨೦೧೬ (ಕಾರ್ತೀಕ ೨೦, ಶಕ ವರ್ಷ ೧೯೩೮)<br>Bengaluru, Friday, November 11, 2016 (Karthika 20, Shaka Varsha 1938) | ನಂ. ೧೨೬೨<br>No. 1262 |
|---|---|---|

### ಜಿಲ್ಲಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

### ಚುನಾವಣಾ ನೋಟೀಸು

**ನಂ. ಚುನಾವಣೆ.ಸಿ.ಆರ್:50/2016.17, ದಿನಾಂಕ:11.11.2016**

ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ಮತ್ತು ಹಿರಿಯೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಸದಸ್ಯರುಗಳ ಅಧಿಕಾರದ ಅವಧಿಯು ಮುಗಿದಿರುವುದರಿಂದ ತೆರವಾಗಿರುವ ಸದಸ್ಯ ಸ್ಥಾನಗಳಿಗೆ ಚುನಾವಣೆ ನಡೆಸಬೇಕಾಗಿರುವುದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968ರ 7ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗ ಜಿಲ್ಲೆಯ ಜಿಲ್ಲಾಧಿಕಾರಿಯಾದ **ಎಂ.ಕೆ.ಶ್ರೀರಂಗಯ್ಯ** ಆದ ನಾನು ಈ ಕೆಳಗೆ ಕಾಣಿಸಿದಂತೆ ಚುನಾವಣಾ ಕಾರ್ಯಕ್ರಮದ ವೇಳಾಪಟ್ಟಿಯನ್ನು ನಿಗದಿಪಡಿಸಿರುತ್ತೇನೆ.

**ಚಿತ್ರದುರ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಈ ಕೆಳಕಂಡಂತೆ ವಿವಿಧ ಕ್ಷೇತ್ರಗಳಿಂದ ಸದಸ್ಯರನ್ನು ಚುನಾಯಿಸಬೇಕಾಗಿರುತ್ತದೆ.**

| ಕ್ರ.ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವಿವರ | ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| 1 | ಭರಮಸಾಗರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 2 | ಯಳಗೋಡು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ಬ ವರ್ಗ |
| 3 | ಚಿಕ್ಕಗೊಂಡನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ತುರುವನೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಅನುಸೂಚಿತ ಪಂಗಡ |
| 5 | ದ್ಯಾಮವ್ವನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 6 | ದೊಡ್ಡಸಿದ್ದವ್ವನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಅನುಸೂಚಿತ ಜಾತಿ |
| 7 | ಚಿತ್ರದುರ್ಗ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ಅ ವರ್ಗ |
| 8 | ಗೊಡಬನಹಾಳು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 9 | ಮಾನಂಗಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 10 | ಭೀಮಸಮುದ್ರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 11 | ಸಿರಿಗೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 12 | ವರ್ತಕರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಸಹಕಾರ ಸಂಸ್ಕರಣ ಸಂಘಗಳ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |

**ಹಿರಿಯೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಈ ಕೆಳಕಂಡಂತೆ ವಿವಿಧ ಕ್ಷೇತ್ರಗಳಿಂದ ಸದಸ್ಯರನ್ನು ಚುನಾಯಿಸಬೇಕಾಗಿರುತ್ತದೆ**

| ಕ್ರಸಂ | ಕ್ಷೇತ್ರದ ಹೆಸರು | ಕ್ಷೇತ್ರದ ವಿವರ | ಸದಸ್ಯರ ಸಂಖ್ಯೆ | ನಿಗದಿ ಪಡಿಸಲಾದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| 1 | ಐಮಂಗಲ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 2 | ಯರಬಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ಅ ವರ್ಗ |
| 3 | ಅಂಬಲಗೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 4 | ಅಬ್ಬಿನಹೊಳೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 5 | ಧರ್ಮಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 6 | ಇಕ್ಕನೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 7 | ಮಸ್ಕಲ್ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ಬ ವರ್ಗ |
| 8 | ಹಿರಿಯೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 9 | ವಾಣಿವಿಲಾಸಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಅನುಸೂಚಿತ ಪಂಗಡ |
| 10 | ಉಡುವಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 11 | ಜವನಗೊಂಡನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಅನುಸೂಚಿತ ಜಾತಿ |
| 12 | ವರ್ತಕರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ಸಹಕಾರ ಮಾರುಕಟ್ಟೆ ವ್ಯವಹಾರ ಸಂಘಗಳ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಸಹಕಾರ ಸಂಸ್ಕರಣ ಸಂಘಗಳ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |

**ಚುನಾವಣಾ ವೇಳಾಪಟ್ಟಿ**

| | | | |
|---|---|---|---|
| 1 | ನಾಮಪತ್ರಗಳನ್ನು ಸಲ್ಲಿಸಲು ಕೊನೆಯ ದಿನಾಂಕ ಮತ್ತು ದಿನ | : | 18.11.2016 (ಶುಕ್ರವಾರ) |
| 2 | ನಾಮಪತ್ರಗಳನ್ನು ಪರಿಶೀಲಿಸುವ ದಿನಾಂಕ ಮತ್ತು ದಿನ | : | 19.11.2016 (ಶನಿವಾರ) |
| 3 | ಉಮೇದುವಾರಿಕೆಗಳನ್ನು ಹಿಂತೆಗೆದುಕೊಳ್ಳಲು ಕೊನೆಯ ದಿನಾಂಕ ಮತ್ತು ದಿನ | : | 21.11.2016 (ಸೋಮವಾರ) |
| 4 | ಮತದಾನ ಅವಶ್ಯವಿದ್ದರೆ, ಮತದಾನವನ್ನು ನಡೆಸಬೇಕಾದ ದಿನಾಂಕ ಮತ್ತು ದಿನ (ಮತದಾನದ ಸಮಯ ಬೆಳಗ್ಗೆ 8.00 ಗಂಟೆಯಿಂದ ಸಂಜೆ 4.00 ಗಂಟೆಯವರೆಗೆ) | : | 01.12.2016 (ಗುರುವಾರ) |
| 5 | ಮತ ಎಣಿಕೆ ನಡೆಯುವ ದಿನಾಂಕ ಮತ್ತು ದಿನ ಬೆಳಗ್ಗೆ 8.00 ಗಂಟೆಯಿಂದ | : | 03.12.2016 (ಶನಿವಾರ) |
| 6 | ಚುನಾವಣೆಯನ್ನು ಯಾವ ದಿನಾಂಕಕ್ಕೆ ಮುಂಚೆ ಮುಕ್ತಾಯಗೊಳಿಸಬೇಕೋ ಆ ದಿನಾಂಕ ಮತ್ತು ದಿನ | : | 03.12.2016 (ಶನಿವಾರ) |

ಮೇಲ್ಕಂಡ ವೇಳಾಪಟ್ಟಿಯಂತೆ ಕೆಳಕಾಣಿಸಿದ ಸ್ಥಳ ಹಾಗೂ ಸಮಯದಲ್ಲಿ ನಿಗದಿತ ದಿನಾಂಕಗಳಂದು (ಸಾರ್ವಜನಿಕ ರಜಾ ದಿನ ಹೊರತುಪಡಿಸಿ) ನಾಮಪತ್ರಗಳನ್ನು ಸಲ್ಲಿಸಬಹುದು. ಚುನಾವಣಾ ವೇಳಾಪಟ್ಟಿಯಂತೆ ನಿಯಮಾನುಸಾರ ಚುನಾವಣೆ ಪ್ರಕ್ರಿಯೆ ಪ್ರಾರಂಭಿಸಲು ಸಂಬಂಧಪಟ್ಟ ಚುನಾವಣಾಧಿಕಾರಿಗಳಿಗೆ ಸೂಚಿಸಿದೆ.

| ಕ್ರಸಂ | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಹೆಸರು | ನಾಮಪತ್ರಗಳನ್ನು ಸ್ವೀಕರಿಸುವ ಸ್ಥಳ | ನಾಮಪತ್ರಗಳನ್ನು ಸಲ್ಲಿಸಲು ನಿಗದಿಪಡಿಸಿದ ಸಮಯ |
|---|---|---|---|
| 1 | ಚಿತ್ರದುರ್ಗ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ | ಚುನಾವಣಾಧಿಕಾರಿಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಚಿತ್ರದುರ್ಗ ಹಾಗೂ ತಹಶೀಲ್ದಾರ್, ತಹಶೀಲ್ದಾರ್‌ರವರ ಕಾರ್ಯಾಲಯ, ಚಿತ್ರದುರ್ಗ | ಬೆಳಗ್ಗೆ 11.00 ಗಂಟೆಯಿಂದ ಮಧ್ಯಾಹ್ನ 3.00 ಗಂಟೆಯವರೆಗೆ |
| 2 | ಹಿರಿಯೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ | ಚುನಾವಣಾಧಿಕಾರಿಗಳು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಹಿರಿಯೂರು ಹಾಗೂ ತಹಶೀಲ್ದಾರ್, ತಹಶೀಲ್ದಾರ್‌ರವರ ಕಾರ್ಯಾಲಯ, ಹಿರಿಯೂರು | |

**ಎಂ.ಕೆ. ಶ್ರೀರಂಗಯ್ಯ**
ಜಿಲ್ಲಾಧಿಕಾರಿಗಳು
ಚಿತ್ರದುರ್ಗ ಜಿಲ್ಲೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–III | ಬೆಂಗಳೂರು, ಸೋಮವಾರ, ನವೆಂಬರ್ ೧೪, ೨೦೧೬ (ಕಾರ್ತೀಕ ೨೩, ಶಕ ವರ್ಷ ೧೯೩೮) | ನಂ. ೧೨೬೫ |
|---|---|---|
| Part–III | Bengaluru, Monday, November 14, 2016 (Karthika 23, Shaka Varsha 1938) | No. 1265 |

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

## ಚುನಾವಣೆಯ ನೋಟೀಸು

**ನಂ : ಚು (2) ವಿವ/222/2015–16, ದಿನಾಂಕ: 14.11.2016**

ತುಮಕೂರು ಜಿಲ್ಲೆಯ ಗುಬ್ಬಿ, ಕುಣಿಗಲ್, ತಿಪಟೂರು, ತುರುವೇಕೆರೆ, ಮಧುಗಿರಿ, ಶಿರಾ ಮತ್ತು ಪಾವಗಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳ ಸದಸ್ಯರುಗಳ ಅಧಿಕಾರದ ಅವಧಿಯು ಮುಗಿದಿರುವುದರಿಂದ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ನಿಯಮಗಳು 1968ರ 7ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತುಮಕೂರು ಜಿಲ್ಲಾಧಿಕಾರಿ ಕೆ.ಪಿ.ಮೋಹನ್‌ರಾಜ್, ಭಾ.ಆ.ಸೇ., ಆದ ನಾನು ಈ ಕೆಳಗೆ ಕಾಣಿಸಿದಂತೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಚುನಾವಣೆಯನ್ನು ನಡೆಸಲಾಗುತ್ತದೆ ಎಂದು ಈ ಮೂಲಕ ಪ್ರಕಟಿಸುತ್ತೇನೆ.

**ಮೇಲ್ಕಂಡ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಿಗೆ ಈ ಕೆಳಕಂಡಂತೆ ವಿವಿಧ ಕ್ಷೇತ್ರಗಳಿಂದ ಸದಸ್ಯರನ್ನು ಚುನಾಯಿಸಬೇಕಾಗಿರುತ್ತದೆ.**

| ಕ್ರ. ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವಿವರ | ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| **ಗುಬ್ಬಿ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಹಾಗಲವಾಡಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 2 | ಅಂಕಸಂದ್ರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 3 | ಚೇಳೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ಗುಬ್ಬಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 5 | ಜಿ. ಹೊಸಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 6 | ನಿಟ್ಟೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 7 | ದೊಡ್ಡಗುಣಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 8 | ಮಾರಶೆಟ್ಟಿಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 9 | ಕಡಬ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 10 | ಸಿ.ಎಸ್.ಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 11 | ಮಾವಿನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |

| ಕ್ರ. ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವಿವರ | ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| **ಕುಣಿಗಲ್ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಕೊತ್ತಗೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 2 | ಬೋರಲಿಂಗನಪಾಳ್ಯ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 3 | ಸಂತೆಮಾವತ್ತೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ಯಲಿಯೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 5 | ಜೋಡಿಹೊಸಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 6 | ನಿಡಸಾಲೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 7 | ಹುಲಿಯೂರುದುರ್ಗ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 8 | ಯಡವಾಣಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 9 | ಅಮೃತೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 10 | ಯಡಿಯೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 11 | ನಾಗಸಂದ್ರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| **ತಿಪಟೂರು ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಹಾಲ್ಕುರಿಕೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 2 | ಹೊನ್ನವಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 3 | ಗುಡಿಗೊಂಡನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ಈಡೇನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 5 | ಕಿಬ್ಬನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 6 | ಮಡೇನೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 7 | ಅರಳಗುಪ್ಪೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 8 | ರಂಗಾಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 9 | ನಾಗರಘಟ್ಟ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 10 | ಸೋಗೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 11 | ನೊಣವಿನಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| **ತುರುವೇಕೆರೆ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಬಾಣಸಂದ್ರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 2 | ದಂಡಿನಶಿವರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 3 | ಸಂಪಿಗೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ತುರುವೇಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 5 | ಕೊಂಡಜ್ಜಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 6 | ತಾಳಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 7 | ತಂಡಗ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 8 | ದಬ್ಬೇಘಟ್ಟ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 9 | ಮುತ್ತಗದಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 10 | ಮಾಯಸಂದ್ರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |

| ಕ್ರ. ಸಂ. | ಕ್ಷೇತ್ರದ ಹೆಸರು | ಕ್ಷೇತ್ರದ ವಿವರ | ಸದಸ್ಯರ ಸಂಖ್ಯೆ | ನಿಗಧಿ ಪಡಿಸಲಾದ ಮೀಸಲಾತಿ ವಿವರ |
|---|---|---|---|---|
| 1 | 2 | 3 | 4 | 5 |
| 11 | ಸೀಗೇಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| **ಮಧುಗಿರಿ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಮಧುಗಿರಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 2 | ಸಿದ್ಧಾಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 3 | ಪುರವರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 4 | ಬ್ಯಾಲ್ಯ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 5 | ಕೊಡಿಗೇನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 6 | ಕಡಗತ್ತೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 7 | ಇಟಕದಿಬ್ಬನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 8 | ಮಿಡಿಗೇಶಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 9 | ಹೊಸಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 10 | ದೊಡ್ಡೇರಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 11 | ದಬ್ಬೇಘಟ್ಟ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| **ಶಿರಾ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ಹುಲಿಕುಂಟೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಬ |
| 2 | ಬರಗೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 3 | ಗೌಡಗೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 4 | ಮದಲೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 5 | ತಾವರೆಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 6 | ಬಿದರೆಕೆರೆ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 7 | ಭೂವನಹಳ್ಳಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 8 | ಬುಕ್ಕಾಪಟ್ಟಣ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಮಹಿಳೆ |
| 9 | ಕಳ್ಳಂಬೆಳ್ಳ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಪಂಗಡ |
| 10 | ದೊಡ್ಡಅಗ್ರಹಾರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 11 | ತರೂರು | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 12 | ವ್ಯಾಪಾರಗಾರರ ಕ್ಷೇತ್ರ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 13 | ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 14 | ಕೃಷಿ ಹುಟ್ಟುವಳಿ ಸಂಸ್ಕರಣ ಸಹಕಾರ ಸಂಘದ ಸದಸ್ಯರಿಂದ | | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| **ಪಾವಗಡ ತಾಲ್ಲೂಕು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಸದಸ್ಯರುಗಳ ಚುನಾವಣೆ** | | | | |
| 1 | ದೊಮ್ಮತಮರಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಹಿಂದುಳಿದ ವರ್ಗ–ಅ |
| 2 | ರಾಜವಂತಿ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಪರಿಶಿಷ್ಟ ಜಾತಿ |
| 3 | ಪಾವಗಡ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |
| 4 | ಚನ್ನಕೇಶವಪುರ | ಕೃಷಿಕರ ಕ್ಷೇತ್ರದಿಂದ | ಒಬ್ಬ ಸದಸ್ಯರ ಚುನಾವಣೆ | ಸಾಮಾನ್ಯ |

practice in the State may apply for supplementary registration with such fee, not less than of rupees five thousand and five hundred, in such manner and subject to such terms and conditions, as may be prescribed.

(2E) The practitioners specified under sub-section (1) and (2D) who are willing to incorporate Post Graduate degree or diploma or any other higher qualification may include such qualification in the register in such manner on payment of such fee, not less than rupees three thousand, as may be prescribed."

**3. Substitution of section 36.-** For section 36 of the principal Act, the following shall be substituted, namely:-

**"36. Penalty.-** Any person who act in contravention of the provisions of section 34 and 35 of this Act, shall on conviction, be punished with fine which may extend to rupees twenty five thousand for the first offence, to a fine of rupees two lakhs fifty thousand and imprisonment of one year for the second offence and a fine of rupees five lakhs and imprisonment for a term not exceeding three years for every subsequent offence after the conviction of such person for such subsequent offence."

**4. Amendment of section 37.-** In section 37 of the principal Act, in sub-section (2), for the words "one thousand rupees", the words "rupees five lakhs" shall be substituted.

**5. Amendment of section 38.-** In section 38 of the principal Act, in sub-section (2), for the words "two hundred and fifty rupees", and " five hundred rupees" the words "fifty thousand rupees" and "five lakhs rupees" shall respectively be substituted.

## STATEMENT OF OBJECTS AND REASONS

It is considered necessary to amend the Karnataka Ayurvedic, Naturopathy, Siddha, Unani and Yoga Practitioners Registration and Medical Practitioners' Miscellaneous provisions Act, 1961 to provide for,-

(i) the provisional registration of Ayush Practitioners;
(ii) issue of duplicate identity card;
(iii) supplementary registration;
(iv) incorporation of higher qualification in the register; and
(v) enhancement of penalties under section 36, 37 and 38 for contravention of the provisions of this Act.

Hence, the Bill.

## FINANCIAL MEMORANDUM

There is no extra expenditure involved in the proposed legislative measure.

## MEMORANDUM REGARDING DELEGATED LEGISLATION

**Clause 2:** In sub-sections (2B), (2C), (2D) and (2E) of section 16 sought to be inserted by clause 2,-

(i) Sub-clause (2B), empowers the State Government to prescribe by rules the fee, the manner and the conditions for provisional registration;
(ii) Sub-clause (2C), empowers the State Government to prescribe by rules, the fee, the manner and the conditions for issue of duplicate identity card;
(iii) Sub-clause (2D), empowers the State Government to prescribe by rules, the fee, the manner and the terms and conditions for supplementary registration to practice in our State simultaneously; and
(iv) sub-clause (2E), empowers the State Government to prescribe by rules, the fee, the manner and the terms and conditions to incorporate higher educational qualification in the register.

The proposed delegation of legislative power is normal in Character.

**K.R. RAMESH KUMAR**
Minister for Health and Family Welfare

**S.Murthy**
Secretary (I/C)
Karnataka Legislative Assembly

## ANNEXURE

## EXTRACT FROM THE KARNATAKA AYURVEDIC, NATUROPATHY, SIDDA, UNANI AND YOGA PRACTITIONERS REGISTRATION AND MEDICAL PRACTITIONERS MISCELLANEOUS PROVISIONS ACT, 1961 (KARNATAKA ACT 09 OF 1962)

**XXX XXX XXX**

16. Registration and removal from register.— **XXX XXX XXX**

(2A) Notwithstanding anything contained in sub-sections (1) and (2), but subject to the proviso to sub-section (2), every person who within a period of one year from the date of commencement of the Amendment Act, produces such proof, as may be prescribed, to prove to the satisfaction of the Registrar that he has been in the regular practice in the State of Karnataka, as a Practitioner of Naturopathy System of treatment, Siddha System of Medicine and Yoga System of treatment for a period of not less than ten years preceding the date on which the amendment Act comes into force and that he has completed thirty-five years of age on the said date for being registered as a practitioner under this Chapter, shall be entitled to have his name entered in the Register on payment of fee specified in sub-section (1).

**XXX XXX XXX**

**36. Penalty.**—Any person who acts in contravention of the provisions of section 34 or 35 shall, on conviction, be punished with fine which may extend to one hundred rupees for the first offence, to five hundred rupees for the second offence, and to imprisonment for a term not exceeding two years and a fine not exceeding one thousand rupees for every subsequent offence after his conviction for such second offence.

**XXX XXX XXX**

**37. Conferring, granting or issuing colourable imitations of degrees, diplomas or licences to be an offence.—**

**XXX XXX XXX**

(2) Whoever contravenes the provisions of this section shall, on conviction, be punished with fine which may extend to one thousand rupees.

**XXX XXX XXX**

**38. Prohibition against addition of any title, description, etc., to name of any person, unless authorised to do so.—**

**XXX XXX XXX**

(2) Whoever contravenes the provisions of sub-section (1), shall on conviction, be punished in the case of a first conviction with fine which may extend to two hundred and fifty rupees and in the case of subsequent conviction, with fine which may extend to five hundred rupees.

**XXX XXX XXX**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 150

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ-*IVA* | ಬೆಂಗಳೂರು, ಬುಧವಾರ, ನವೆಂಬರ್ ೨೩, ೨೦೧೬ (ಮಾರ್ಗಶಿರ ೨, ಶಕ ವರ್ಷ ೧೯೩೮) | ನಂ. ೧೨೯೭ |
| *Part–IVA* | *Bengaluru, Wednesday, November 23, 2016 (Margasira 2, Shaka Varsha 1938)* | *No. 1297* |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/31/Bill/2016, Bengaluru, Dated: 23.11.2016**

This following Bill was introduced in Legislative Assembly on 23.11.2016

**ಕರ್ನಾಟಕ ವಿಧಾನಸಭೆ**

**ಹದಿನಾಲ್ಕನೇ ವಿಧಾನಸಭೆ**

**ಹನ್ನೆರಡನೇ ಅಧಿವೇಶನ**

**ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ-31)**

ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ನ್ನು (2001ರ ಕರ್ನಾಟಕ ಅಧಿನಿಯಮ 29) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**-(1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪದಾವಳಿಯ ಪ್ರತಿಯೋಜನೆ.-** ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರಲ್ಲಿ (2001ರ ಕರ್ನಾಟಕ ಅಧಿನಿಯಮ 29) "ಮಹಿಳಾ ವಿಶ್ವವಿದ್ಯಾನಿಲಯ" ಎಂಬ ಪದಾವಳಿಯು ಬರುವೆಡೆಗಳಲ್ಲೆಲ್ಲಾ "ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ" ಎಂಬ ಪದಾವಳಿಗಳನ್ನು ಪ್ರತ್ಯಯಗಳೊಡನೆ ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಕರ್ನಾಟಕದಲ್ಲಿ 12ನೇ ಶತಮಾನದ ಸಾಮಾಜಿಕ ಚಳುವಳಿಯಲ್ಲಿ ಮಹತ್ತರ ಪಾತ್ರವನ್ನು ವಹಿಸಿದ್ದು ಮತ್ತು ಮಹಿಳೆಯರಿಗೆ ಹಕ್ಕು ಹಾಗೂ ಗೌರವವನ್ನು ನೀಡುವುದರ ಪರವಾಗಿ ಸಮರ್ಥವಾಗಿ ವಾದಮಾಡಿ ಹೋರಾಡಿದ ಮಧ್ಯಯುಗದ ಕನ್ನಡದ ಕವಿಯತ್ರಿ, ಬಂಡಾಯಗಾರ್ತಿ ಮತ್ತು ಅನುಭಾವಿ ಸಂತ ವಚನಗಾರ್ತಿ ಅಕ್ಕಮಹಾದೇವಿಯವರನ್ನು ಗೌರವಿಸುವುದಕ್ಕಾಗಿ "ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯ" ವನ್ನು "ಕರ್ನಾಟಕ ರಾಜ್ಯ ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ" ಎಂದು ಮರುನಾಮ ನೀಡಲು ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ವನ್ನು

ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ. ನೀತಿಬೋಧಕ ಶೈಲಿಯ ಪದ್ಯಗಳಾದ ಆಕೆಯ ವಚನಗಳನ್ನು ಕನ್ನಡ ಭಕ್ತಿ ಸಾಹಿತ್ಯದಲ್ಲಿ ಉನ್ನತವಾದ ಕೊಡುಗೆಯೆಂದು ಪರಿಗಣಿಸಲಾಗಿದೆ. ಬದಲಾಗುತ್ತಿರುವ ವಿಶ್ವವ್ಯಾಪಕ ಸನ್ನಿವೇಶಗಳ ಸವಾಲುಗಳನ್ನು ಎದುರಿಸಲು ಮಹಿಳೆಯರನ್ನು ಸಶಕ್ತಗೊಳಿಸುವ ಉದ್ದೇಶಗಳಿಗಾಗಿ 2003–04ನೇ ಶೈಕ್ಷಣಿಕ ವರ್ಷದಿಂದ ವಿಜಯಾಪುರವನ್ನು ಕೇಂದ್ರಸ್ಥಾನವಾಗಿ ಹೊಂದಿರುವ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಲಾಗಿದೆ.

ಆದ್ದರಿಂದ, ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಬಸವರಾಜ ರಾಯರೆಡ್ಡಿ**
ಉನ್ನತ ಶಿಕ್ಷಣ ಮಂತ್ರಿಗಳು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನಸಭೆ

**ಅನುಬಂಧ**
**ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ ಅಧಿನಿಯಮ, 2000ರ (2001ರ ಕರ್ನಾಟಕ ಅಧಿನಿಯಮ ಸಂಖ್ಯೆ 29)**
**ಉದ್ಧೃತ ಭಾಗ**

**3. ವಿಶ್ವವಿದ್ಯಾನಿಲಯಗಳ ಸ್ಥಾಪನೆ ಮತ್ತು ನಿಗಮನ.-**

Xx xx xx

(1ಎ) ಮಹಿಳೆಯರು ಕಲಿಕೆಯನ್ನು ಮುಂದುವರಿಸಿ, ಉನ್ನತ ಶಿಕ್ಷಣ ಹಾಗೂ ಸಂಶೋಧನೆಯಲ್ಲಿ ಪ್ರಗತಿಯನ್ನು ಸಾಧಿಸುವುದಕ್ಕಾಗಿ, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನ ವಿಹೆಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ರಾಜ್ಯದಲ್ಲಿರುವ ಮಹಿಳಾ ಕಾಲೇಜುಗಳ ಮತ್ತು ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಗಳ ಮೇಲೆ ಸಂಯೋಜನೆಯನ್ನು ಮಂಜೂರು ಮಾಡುವುದನ್ನು ಒಳಗೊಂಡಿರುವಂತೆ ಪ್ರಾದೇಶಿಕ ಅಧಿಕಾರವ್ಯಾಪ್ತಿಯನ್ನು ಹೊಂದಿರುವ ಹಾಗೂ ಬಿಜಾಪುರದಲ್ಲಿ ಕೇಂದ್ರ ಕಾರ್ಯಸ್ಥಾನವನ್ನು ಹೊಂದಿರುವ ಒಂದು ಮಹಿಳಾ ವಿಶ್ವವಿದ್ಯಾನಿಲಯವನ್ನು ರಾಜ್ಯದಲ್ಲಿ ಸ್ಥಾಪಿಸತಕ್ಕದ್ದು:

ಪರಂತು, ಇಡೀ ರಾಜ್ಯಕ್ಕೆ ವಿಶ್ವವಿದ್ಯಾನಿಲಯದ ಅಧಿಕಾರವ್ಯಾಪ್ತಿಯನ್ನು ವಿಸ್ತರಿಸುವ ಉದ್ದೇಶಕ್ಕಾಗಿ ಒಂದು ವಿಸ್ತರಣಾ ಕೇಂದ್ರವನ್ನು ಮಂಡ್ಯದಲ್ಲಿ ಸ್ಥಾಪಿಸತಕ್ಕದ್ದು:

ಮತ್ತು ಪರಂತು, ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳನ್ನು ಹೊರತುಪಡಿಸಿ ಇತರ ಜಿಲ್ಲೆಗಳೊಳಗೆ ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭಕ್ಕೆ ಮೊದಲು ಸ್ಥಾಪಿತವಾದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ 13 ಕಾಲೇಜುಗಳು, ಹಿಂದೆ ಪ್ರವೇಶವನ್ನು ಪಡೆದ ವಿಶ್ವವಿದ್ಯಾನಿಲಯಗಳಲ್ಲಿ ಸಂಯೋಜನೆಯನ್ನು ಉಳಿಸಿಕೊಳ್ಳುವುದಕ್ಕಾಗಲೀ ಅಥವಾ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ಸಂಯೋಜನೆಗೆ ವರ್ಗಾವಣೆ ಪಡೆಯುವುದಕ್ಕಾಗಲೀ ಆಯ್ಕೆಯನ್ನು, ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದಿಂದ ಆರು ತಿಂಗಳುಗಳೊಳಗೆ ಚಲಾಯಿಸತಕ್ಕದ್ದು:

ಅಲ್ಲದೆ ಪರಂತು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿದ ಖಾಸಗಿ ಅನುದಾನಿತ ಅಥವಾ ಅನುದಾನ ರಹಿತ ಮಹಿಳಾ ಕಾಲೇಜುಗಳು, ಸದರಿ ತಿದ್ದುಪಡಿ ಅಧಿನಿಯಮ ಪ್ರಾರಂಭವಾದ ದಿನಾಂಕದಿಂದ ಆರು ತಿಂಗಳು ಪೂರ್ಣವಾದ ದಿನಾಂಕದಿಂದ ಜಾರಿಗೆ ಬರುವಂತೆ ವರ್ಗಾವಣೆಗೊಂಡಿವೆಯೆಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಯನ್ನು ಪಡೆಯುವುದಕ್ಕೆ ಆಯ್ಕೆ ಮಾಡಿಲ್ಲದ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳ ಸಂಯೋಜನೆಯು ಈ ಹಿಂದೆ ಅವು ಸಂಯೋಜನೆಗೊಂಡಿದ್ದ ಹಿಂದಿನ ವಿಶ್ವವಿದ್ಯಾನಿಲಯದಲ್ಲಿಯೇ ಮುಂದುವರೆಯತಕ್ಕದ್ದು.

Xx xx xx

**5. ಅಧಿಕಾರ ವ್ಯಾಪ್ತಿ, ವಿಶೇಷಾಧಿಕಾರ ಇತ್ಯಾದಿಗಳಿಗೆ ಪ್ರವೇಶಾವಕಾಶ.-**

Xx xx xx

(2) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2003ರ ಪ್ರಾರಂಭದ ದಿನಾಂಕಕ್ಕೆ ಮೊದಲು ಯಾವುದೇ ಮಹಿಳಾ ಕಾಲೇಜು ಅಥವಾ ಇತರ ಮಹಿಳಾ ಶೈಕ್ಷಣಿಕ ಸಂಸ್ಥೆಯು, ಗುಲ್ಬರ್ಗಾ ವಿಶ್ವವಿದ್ಯಾನಿಲಯದಿಂದ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರವನ್ನು ಈ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ದಿನಾಂಕದಿಂದ ಜಾರಿಗೆ ಬರುವಂತೆ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಗುಲ್ಬರ್ಗಾ ವಿಶ್ವವಿದ್ಯಾನಿಲಯದ ಅಥವಾ ಕರ್ನಾಟಕ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಈ ಹಿಂದೆ ಪ್ರವೇಶ ಪಡೆದುಕೊಂಡಿದ್ದ ಅಥವಾ ಸಂಯೋಜಿತವಾಗಿದ್ದ, ಎಲ್ಲ ಅಂಥ ಮಹಿಳಾ ಕಾಲೇಜುಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು ಮಹಿಳಾ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರಗಳಿಗೆ ಪ್ರವೇಶ ಪಡೆದುಕೊಂಡಿವೆ ಎಂದು ಅಥವಾ ಅದಕ್ಕೆ ಸಂಯೋಜಿತವಾಗಿವೆ ಎಂದು ಭಾವಿಸತಕ್ಕದ್ದು.

Xx xx xx

(6) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಮಹಾರಾಣಿ ಮಹಿಳಾ ವಿಜ್ಞಾನ ಮತ್ತು ಕಲಾ ಕಾಲೇಜು, ಬೆಂಗಳೂರು, ಸರ್ಕಾರಿ ಗೃಹವಿಜ್ಞಾನದ ವಿಎಚ್‌ಡಿ ಸಂಸ್ಥೆ, ಬೆಂಗಳೂರು, ಮಹಾರಾಣಿ ವಿಜ್ಞಾನ ಮತ್ತು ಕಲಾ ಕಾಲೇಜು, ಮೈಸೂರು ಮತ್ತು ಸರ್ಕಾರಿ ಮಹಿಳಾ ಪ್ರಥಮ ದರ್ಜೆ ಕಾಲೇಜು, ಮೈಸೂರು ಇವುಗಳನ್ನು ಹೊರತುಪಡಿಸಿ, ಈ ಅಧಿನಿಯಮದಡಿಯಲ್ಲಿ ಸ್ಥಾಪಿಸಲಾದ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲಾ ವಿಶ್ವವಿದ್ಯಾನಿಲಯಗಳಿಂದ ಸರ್ಕಾರಿ ಮಹಿಳಾ ಕಾಲೇಜುಗಳು ಅನುಭವಿಸುತ್ತಿರುವ ಯಾವುದೇ ವಿಶೇಷಾಧಿಕಾರ ಅಥವಾ ಸಂಯೋಜನೆಯನ್ನು ತಕ್ಷಣದಿಂದಲೇ ಹಿಂತೆಗೆದುಕೊಳ್ಳಲಾಗಿದೆ ಎಂದು ಭಾವಿಸತಕ್ಕದ್ದು ಮತ್ತು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಅಂಥ ಇತರ ವಿಶ್ವವಿದ್ಯಾನಿಲಯಗಳ ವಿಶೇಷಾಧಿಕಾರಕ್ಕೆ ಈ ಮೊದಲು ಪ್ರವೇಶಪಡೆದಿದ್ದ ಅಥವಾ ಸಂಯೋಜನೆಗೊಂಡಿದ್ದ ಅಂಥ ಎಲ್ಲಾ ಸರ್ಕಾರಿ ಮಹಿಳಾ ಕಾಲೇಜುಗಳು, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯದ ವಿಶೇಷಾಧಿಕಾರವನ್ನು ಪಡೆದಿದೆ ಅಥವಾ ಸಂಯೋಜನೆಗೊಂಡಿದೆ ಎಂದು ಭಾವಿಸತಕ್ಕದ್ದು.

(7) ಬೀದರ್, ಗುಲ್ಬರ್ಗ, ಯಾದಗಿರಿ, ರಾಯಚೂರು, ಕೊಪ್ಪಳ, ಬಳ್ಳಾರಿ, ಧಾರವಾಡ, ಗದಗ, ಹಾವೇರಿ, ಉತ್ತರಕನ್ನಡ, ಬೆಳಗಾವಿ, ಬಿಜಾಪುರ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ಇರುವ ಖಾಸಗಿ (ಅನುದಾನಿತ ಅಥವಾ ಅನುದಾನರಹಿತ) ಮಹಿಳಾ ಕಾಲೇಜುಗಳನ್ನು ಹೊರತುಪಡಿಸಿ, ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ದಿನಾಂಕಕ್ಕೆ ಮೊದಲು, ಈ ಅಧಿನಿಯಮದ ಅಡಿಯಲ್ಲಿ ಸ್ಥಾಪಿತವಾದ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯವಲ್ಲದೆ ಇತರ ಎಲ್ಲ ವಿಶ್ವವಿದ್ಯಾನಿಲಯಗಳಿಂದ ಯಾವುದೇ ವಿಶೇಷಾಧಿಕಾರ ಮತ್ತು ಸಂಯೋಜನೆಯನ್ನು ಅನುಭವಿಸುತ್ತಿರುವ, ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆ ಪಡೆಯುವುದಕ್ಕೆ ತಮ್ಮ ಆಯ್ಕೆಯನ್ನು ಚಲಾಯಿಸಿರುವ ಖಾಸಗಿ ಅನುದಾನಿತ ಅಥವಾ ಅನುದಾನರಹಿತ ಮಹಿಳಾ ಕಾಲೇಜುಗಳು ಸದರಿ ತಿದ್ದುಪಡಿ ಅಧಿನಿಯಮದ ಪ್ರಾರಂಭದ ದಿನಾಂಕದ ಆರು ತಿಂಗಳುಗಳ ಅವಧಿಯ ಮುಕ್ತಾಯದಿಂದ ಜಾರಿಗೆ ಬರುವಂತೆ ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ವರ್ಗಾವಣೆಗೊಂಡಿದೆಯೆಂದು ಭಾವಿಸತಕ್ಕದ್ದು. ವರ್ಗಾವಣೆಯನ್ನು ಆಯ್ಕೆಮಾಡಿಕೊಂಡಿಲ್ಲದ ಉಳಿದ ಕಾಲೇಜುಗಳು ತಾವು ಸಂಯೋಜನೆಗೊಂಡ ಹಿಂದಿನ ವಿಶ್ವವಿದ್ಯಾನಿಲಯಗಳಲ್ಲಿ ಅನುಭವಿಸುತ್ತಿರುವ ವಿಶೇಷಾಧಿಕಾರ ಅಥವಾ ಸಂಯೋಜನೆಯು ಮುಂದುವರಿಯತಕ್ಕದ್ದು.

(8) ಕರ್ನಾಟಕ ರಾಜ್ಯ ವಿಶ್ವವಿದ್ಯಾನಿಲಯಗಳ (ತಿದ್ದುಪಡಿ) ಅಧಿನಿಯಮ, 2014ರ ಪ್ರಾರಂಭದ ತರುವಾಯ ಸರ್ಕಾರವಾಗಲೀ ಅಥವಾ ಖಾಸಗಿ ಸಂಸ್ಥೆಗಳಾಗಲೀ ಸ್ಥಾಪಿಸುವ ಯಾವುದೇ ಹೊಸ ಮಹಿಳಾ ಕಾಲೇಜು ಕರ್ನಾಟಕ ರಾಜ್ಯ ಮಹಿಳಾ ವಿಶ್ವವಿದ್ಯಾನಿಲಯಕ್ಕೆ ಸಂಯೋಜನೆಗೊಳ್ಳತಕ್ಕದ್ದು.

Xx xx xx

**6. ವಿಶ್ವವಿದ್ಯಾನಿಲಯವು ಎಲ್ಲಾ ವರ್ಗಗಳ ವ್ಯಕ್ತಿಗಳಿಗೂ ಮುಕ್ತವಾಗಿರತಕ್ಕದ್ದು.-**

Xx xx xx

ಪರಂತು, ಮಹಿಳಾ ವಿಶ್ವವಿದ್ಯಾನಿಲಯವು, ಎಲ್ಲಾ ಮಹಿಳೆಯರಿಗೆ ಅವರು ಯಾವುದೇ ಜನಾಂಗ, ಪಂಥ, ಜಾತಿ ಅಥವಾ ವರ್ಗಕ್ಕೆ ಸೇರಿರಲಿ, ಮುಕ್ತವಾಗಿರತಕ್ಕದ್ದು ಮತ್ತು ಯಾವೊಬ್ಬ ಮಹಿಳೆಯು ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕಳಾಗಿ ಅಥವಾ ವಿದ್ಯಾರ್ಥಿನಿಯಾಗಿ ಪ್ರವೇಶ ಪಡೆಯಲು ಅಥವಾ ಅದರಲ್ಲಿ ಯಾವುದೇ ಹುದ್ದೆಯನ್ನು ಧಾರಣ ಮಾಡಲು ಅಥವಾ ಅದರಲ್ಲಿ ಪದವೀಧರಳಾಗಲು ಅಥವಾ ಅದರ ಯಾವುದೇ ವಿಶೇಷಾಧಿಕಾರವನ್ನು ಅನುಭವಿಸಲು ಅಥವಾ ಚಲಾಯಿಸಲು ಹಕ್ಕುಳ್ಳವಳಾಗಿರುವುದಕ್ಕೆ ಸಂಬಂಧಿಸಿದಂತೆ ಯಾವುದೇ ಧಾರ್ಮಿಕ ನಂಬಿಕೆ ಅಥವಾ ನಿಷ್ಠೆಯ ಬಗ್ಗೆ ಯಾವ ಮಹಿಳೆಯ ಮೇಲೆಯೂ ಯಾವುದೇ ರೀತಿಯ ಪರೀಕ್ಷೆಯನ್ನು ವಿಧಿಸುವುದು ವಿಶ್ವವಿದ್ಯಾನಿಲಯಕ್ಕೆ ಕಾನೂನುಬದ್ಧವಾಗಿರತಕ್ಕದ್ದಲ್ಲ.

Xx xx xx

**14. ಕುಲಪತಿ.–**

Xx xx xx

ಮತ್ತು ಪರಂತು, ಸಾಧ್ಯವಾದಷ್ಟು ಮಟ್ಟಿಗೆ ಒಬ್ಬ ಮಹಿಳೆಯೇ ಬಿಜಾಪುರದಲ್ಲಿರುವ ಮಹಿಳಾ ವಿಶ್ವವಿದ್ಯಾನಿಲಯದ ಕುಲಪತಿಯಾಗತಕ್ಕದ್ದು:

ಮತ್ತೂ ಪರಂತು, ಈ ಪ್ರಕರಣದಲ್ಲಿ ವಿರುದ್ಧವಾದುದೇನೇ ಇದ್ದರೂ, ರಾಜ್ಯ ಸರ್ಕಾರವು, ತಾನು ನಿರ್ದಿಷ್ಟಪಡಿಸಬಹುದಾದಂಥ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು ಮಹಿಳಾ ವಿಶ್ವವಿದ್ಯಾನಿಲಯದ ಪ್ರಥಮ ಕುಲಪತಿಯವರನ್ನು ನೇಮಕಮಾಡತಕ್ಕದ್ದು.

Xx xx xx

**28. ಸಿಂಡಿಕೇಟ್.–**

Xx xx xx

ಪರಂತು, ಮಹಿಳಾ ವಿಶ್ವವಿದ್ಯಾನಿಲಯದ ಸಂದರ್ಭದಲ್ಲಿ ಸಿಂಡಿಕೇಟು, ಮೇಲೆ ನಿರ್ದಿಷ್ಟಪಡಿಸಿದ ಸದಸ್ಯರ ಜೊತೆಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಭಾರದಲ್ಲಿರುವ ಕಾರ್ಯದರ್ಶಿಯವರನ್ನು ಅಥವಾ ಉಪಕಾರ್ಯದರ್ಶಿಯವರ ದರ್ಜೆಗೆ ಕಡಿಮೆಯಲ್ಲದ ಅವರ ನಾಮನಿರ್ದೇಶಿತರನ್ನು ಸಹ ಒಳಗೊಂಡಿರತಕ್ಕದ್ದು.

Xx xx xx

**30. ವಿದ್ಯಾವಿಷಯಕ ಪರಿಷತ್ತು.–**

Xx xx xx

ಪರಂತು, ಮಹಿಳಾ ವಿಶ್ವವಿದ್ಯಾನಿಲಯದ ಸಂದರ್ಭದಲ್ಲಿ, ವಿದ್ಯಾವಿಷಯಕ ಪರಿಷತ್ತು, ಮೇಲೆ ನಿರ್ದಿಷ್ಟಪಡಿಸಿದ ಸದಸ್ಯರ ಜೊತೆಗೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಯ ನಿರ್ದೇಶಕರನ್ನು ಸಹ ಒಳಗೊಂಡಿರತಕ್ಕದ್ದು.

Xx xx xx

**32. ಹಣಕಾಸು ಸಮಿತಿ.–**

Xx xx xx

ಪರಂತು, ಮಹಿಳಾ ವಿಶ್ವವಿದ್ಯಾನಿಲಯದ ಸಂದರ್ಭದಲ್ಲಿ, ಹಣಕಾಸು ಸಮಿತಿಯು, ಮೇಲೆ ನಿರ್ದಿಷ್ಟಪಡಿಸಿದ ಸದಸ್ಯರ ಜೊತೆಗೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪ್ರಭಾರದಲ್ಲಿರುವ ಕಾರ್ಯದರ್ಶಿಯವರನ್ನು ಅಥವಾ ಉಪಕಾರ್ಯದರ್ಶಿಯವರ ದರ್ಜೆಗೆ ಕಡಿಮೆಯಲ್ಲದ ಅವರ ನಾಮನಿರ್ದೇಶಿತರನ್ನು ಸಹ ಒಳಗೊಂಡಿರತಕ್ಕದ್ದು.

Xx xx xx

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TWELFTH SESSION**

**THE KARNATAKA STATE UNIVERSITIES (AMENDMENT) BILL, 2016**
**(L.A. Bill No. 31 of 2016)**

A Bill further to amend the Karnataka State Universities Act, 2000.

Whereas it is expedient further to amend the Karnataka State Universities Act, 2000 (Karnataka Act 29 of 2001) for the purposes hereinafter appearing:

Be it enacted by the Karnataka State Legislature in the sixty-seventh year of the Republic of India as follows:-

**1. Short title and Commencement.-** (1) This Act may be called the Karnataka State Universities (Amendment) Act, 2016.

(2) It shall come into force at once.

**2. Substitution of expression.-** In the Karnataka State Universities Act, 2000 (Karnataka Act 29 of 2001), for the words "Women University" wherever they occur, the words " Akkamahadevi Women University" shall be substituted.

**STATEMENT OF OBJECTS AND REASONS**

It is considered necessary to amend the Karnataka State Universities Act, 2000 to re-name the "Karnataka State Women University" as "Karnataka State Akkamahadevi Women University", to honour Saint Akkamahadevi as she is an outstanding medieval Kannada Poet, revolutionary and mystic, had played a vital role in Social Movement of 12th Century in Karnataka and advocated as well as strived for rights and honour of the women. Her vachanas, a form of didactic poetry are considered greatest contribution to Kannada devotional literature. For purposes of empowering women to meet the challenges of changing global scenario the Karnataka State Women University was established with Head Quarters at Vijayapura from the academic year 2003-04.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**BASAVARAJ RAYAREDDI**
MINISTER FOR HIGHER EDUCATION

**S.Murthy**
Secretary (I/C)
Karnataka Legislative Assembly

**ANNEXURE**
**EXTRACT FROM THE KARNATAKA STATE UNIVERSITIES ACT, 2000**
**(KARNATAKA ACT 29 OF 2001)**

**xx xx xx**

3. Establishment and Incorporation of Universities.-

**xx xx xx**

(1A) For furthering the advancement of learning and prosecution of higher education and research by women there shall be established in the State a Women University with Head Quarters at Bijapur and territorial jurisdiction including granting affiliation extending over the women colleges and other women educational institutions in the State, except Maharani Women's Science and Arts College, Bangalore, Government VHD Institute of Home Science, Bangalore, Maharani Science and Arts College, Mysore and Government First Grade College for Women's, Mysore.

Provided that, for the purpose of extending the jurisdiction of the University to the entire state an extension centre shall be established at Mandya.

Provided further that, private aided or unaided women's colleges established prior to the commencement of the Karnataka State Universities (Amendment) Act, 2014 and situated within the districts other than the districts of Bidar, Gulbarga, Yadgir, Raichur, Koppal, Bellary, Dharwad, Gadag, Haveri, Uttara Kannada, Belgaum, Bijapur and Bagalkot shall exercise option of either retaining affiliation to the previously admitted universities or to get transfer of affiliation to the Karnataka State Women University within six months from the date of commencement of the said amendment Act.

Provided also that private aided or unaided women colleges which are opted to get transferred to the Karnataka State Women University shall be deemed to have been transferred to it with effect from the date of completion of six months from the date of the commencement of the said amendment Act and the private aided or unaided women colleges which have not opted to get transfer to the Karnataka State Women University shall continue to retain their affiliation in the previous university to which they were affiliated.

**xx xx xx**

**5. Jurisdiction, admission to privileges, etc.**-

**xx xx xx**

(2) Any privilege enjoyed from Gulbarga University or the Karnataka University by any women college or other women educational institution before the date of commencement of the Karnataka State Universities (Amendment) Act, 2003 shall, with effect from such date as may be specified by the State Government in this behalf be deemed to be withdrawn and all such women colleges or educational institutions previously admitted to the privileges of, or affiliated to, the Gulbarga University or the Karnataka University shall be deemed to be admitted to the privileges of, or affiliated to, the Women University.

**xx xx xx**

(6) Any privilege or affiliation enjoyed from all universities established under this Act, other than the Karnataka State Women University by the Government Women Colleges, except Maharani Women's Science and Arts College, Bangalore, Government VHD Institute of Home Science, Bangalore, Maharani Science and Arts College, Mysore and Government First Grade College for Women's, Mysore prior to the date of commencement of the Karnataka State Universities (Amendment) Act, 2014 shall, immediately be deemed to be withdrawn and all such Government Women Colleges previously admitted to the privileges of, or affiliated to such universities other than Karnataka State Women University shall be deemed to be admitted to the privilege of, or affiliated to the Karnataka State Women University.

(7) Any privilege or affiliation enjoyed from all Universities established under this Act, other than the Karnataka State Woman University by the private aided or unaided women colleges prior to the date of commencement of the Karnataka State Universities (Amendment) Act, 2014 except the Private (aided or unaided) Women Colleges situated in the districts of Bidar, Gulbarga, Yadagiri, Raichur, Koppal, Bellary, Dharwad, Gadag, Haveri, Uttara Kannada, Belgaum, Bijapur and Bagalkot, which have exercised their option to get transferred to the Karnataka State Women University shall with effect from the end of sixth months from the date of the commencement of the said amendment Act, shall be deemed to have transferred to the privilege of affiliation to the Karnataka State Women University. The remaining colleges which have not opted for transfer shall continue to enjoy the privilege of affiliation to previous universities to which they were affiliated.

(8) Any new women college established either by the Government or by Private Organizations after the commencement of the Karnataka State Universities (Amendment) Act, 2014 shall be affiliated to the Karnataka State Women University.

**xx xx xx**

**6. University open to all classes of persons.-**

**xx xx xx**

Provided that the Women University shall be open to all women of whatever race, creed, caste or class and it shall not be lawful for the University to impose on any woman any test whatsoever of religious belief or profession in order to entitle her to be admitted thereto as a teacher or a student or to hold any office therein or to graduate there at or to enjoy or exercise any privilege thereof.

**xx xx xx**

**14. The Vice-Chancellor.-**

**xx xx xx**

Provided further that the Vice-Chancellor of the Women University at Bijapur shall, as far as practicable be a women:

Provided also that notwithstanding anything contrary contained in this section the First Vice-Chancellor of the Women University shall be appointed by the State Government subject to such terms and conditions as may be specified.

**xx xx xx**

**28. Syndicate.-**

**xx xx xx**

Provided that in the case of Women University the Syndicate shall in addition to the members specified above also consist of the Secretary incharge of Women and Child Development Department or his nominee not below the rank of a Deputy Secretary.

**xx xx xx**

**30. Academic Council.-**

**xx xx xx**

Provided that in the case of the Women University the Academic Council shall, in addition to the members specified above also consist of the Director, Women and Child Development.

**xx xx xx**

**32. The Finance Committee.-**

**xx xx xx**

Provided that in the case of Women University, the Finance Committee shall, in addition to the members specified above, also consist of the Secretary in charge of Women and Child Development Department or his nominee not below the rank of a Deputy Secretary.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 150

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–*IVA* | ಬೆಂಗಳೂರು, ಬುಧವಾರ, ನವೆಂಬರ್ ೨೩, ೨೦೧೬ (ಮಾರ್ಗಶಿರ ೨, ಶಕ ವರ್ಷ ೧೯೩೮) | ನಂ. ೧೨೯೮ |
|---|---|---|
| *Part–IVA* | *Bengaluru, Wednesday, November 23, 2016 (Margasira 2, Shaka Varsha 1938)* | *No. 1298* |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/32/Bill/2016, Bengaluru, Dated: 23.11.2016**

This following Bill was introduced in Legislative Assembly on 23.11.2016

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನ ಸಭೆ**

**ಹನ್ನೆರಡನೇ ಅಧಿವೇಶನ**

**ಕರ್ನಾಟಕ ಕೆಲವು ಸ್ಥಳಗಳ ಹೆಸರುಗಳನ್ನು ಬದಲಾಯಿಸುವ ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–32)**

ಕರ್ನಾಟಕ ರಾಜ್ಯದಲ್ಲಿನ ಬೆಂಗಳೂರು ನಗರದ ಮತ್ತು ಕೆಲವು ಇತರ ಸ್ಥಳಗಳ ಹೆಸರನ್ನು ಬದಲಾಯಿಸಲು ಕೆಲವು ಕಾನೂನುಗಳನ್ನು ತಿದ್ದುಪಡಿ ಮಾಡುವುದಕ್ಕಾಗಿ ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯದಲ್ಲಿನ ಬೆಂಗಳೂರು ನಗರದ ಮತ್ತು ಕೆಲವು ಇತರ ಸ್ಥಳಗಳ ಹೆಸರನ್ನು ಬದಲಾಯಿಸಲು ಕೆಲವು ಕಾನೂನುಗಳನ್ನು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ಕೆಲವು ಸ್ಥಳಗಳ ಹೆಸರುಗಳನ್ನು ಬದಲಾಯಿಸುವ ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. ಪರಿಭಾಷೆ.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯತಾ ಅಗತ್ಯಪಡಿಸಿದ ಹೊರತು, "ಕಾನೂನು" ಎಂಬುದು, ಕಾನೂನನ್ನು ಮಾಡಲು ಕರ್ನಾಟಕ ವಿಧಾನಮಂಡಲವು ಸಕ್ಷಮವಾಗಿರುವ ಕರ್ನಾಟಕ ರಾಜ್ಯದಲ್ಲಿ ಸಮಗ್ರವಾಗಿ ಅಥವಾ ಯಾವುದೇ ಭಾಗದಲ್ಲಿ ಕಾನೂನಾಗಿ ಜಾರಿಯಲ್ಲಿರುವ ಯಾವುದೇ ಅಧಿನಿಯಮ, ಅಧ್ಯಾದೇಶ, ವಿನಿಯಮ, ಆದೇಶ, ಉಪವಿಧಿ, ನಿಯಮ, ಸ್ಕೀಮು, ಅಧಿಸೂಚನೆ ಅಥವಾ ಇತರ ಲಿಖಿತಗಳನ್ನು ಒಳಗೊಳ್ಳುತ್ತದೆ.

**3. ಹೆಸರುಗಳ ಬದಲಾವಣೆ.–** ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಮತ್ತು ಆ ದಿನಾಂಕದಿಂದ, ರಾಜ್ಯದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನಲ್ಲಿ ಕಂಡುಬರುವ, ಅನುಸೂಚಿಯ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಸ್ಥಳಗಳ ಹೆಸರುಗಳಿಗೆ ಅದಕ್ಕೆ ಸಂವಾದಿಯಾಗಿ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಹೆಸರುಗಳನ್ನು ಪ್ರತಿಯೋಜಿಸತಕ್ಕದ್ದು.

**4. ಉಲ್ಲೇಖಗಳ ಅರ್ಥೈಸುವಿಕೆ.–** ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು, ಅನುಸೂಚಿಯ (2)ನೇ ಅಂಕಣದಲ್ಲಿ ಉಲ್ಲೇಖಿಸಿದ, ಯಾವುದೇ ಕಾನೂನಿನಲ್ಲಿ ಕಂಡುಬರುವ ಸ್ಥಳಗಳ ಹೆಸರುಗಳ ಯಾವುದೇ ಉಲ್ಲೇಖವು, ಈ

ಅಧಿನಿಯಮವು ಪ್ರಾರಂಭವಾದ ತರುವಾಯ, ಅದರ (3)ನೇ ಅಂಕಣದಲ್ಲಿ ಉಲ್ಲೇಖಿಸಲಾದ ಸಂವಾದಿ ಸ್ಥಳಗಳಿಗೆ ಉಲ್ಲೇಖವೆಂದು ಅರ್ಥೈಸತಕ್ಕದ್ದು.

**5. ಸಿಂಧುತ್ವ ಮತ್ತು ಉಳಿಸುವಿಕೆಗಳು.–** ಅನುಸೂಚಿಯ (2)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಲಾದ ಸ್ಥಳಗಳ ಸಂಬಂಧದಲ್ಲಿ (3)ನೇ ಅಂಕಣದಲ್ಲಿ ನಿರ್ದಿಷ್ಟಪಡಿಸಿದ ಹೆಸರುಗಳನ್ನು ತಿದ್ದುಪಡಿ ಮಾಡುವ 3ನೇ ಪ್ರಕರಣದಲ್ಲಿರುವುದಾವುದೂ, ಈ ಅಧಿನಿಯಮದ ಪ್ರಾರಂಭದ ದಿನಾಂಕದಂದು ಅವು ಅಸ್ತಿತ್ವದಲ್ಲಿರುವಂತೆ ರಾಜ್ಯದ ಯಾವುವೇ ಅಧಿನಿಯಮಗಳ ಅಡಿಯಲ್ಲಿ ಹೊರಡಿಸಲಾದ ಯಾವುದೇ ಅಧಿಸೂಚನೆ, ಆದೇಶ, ನಿಯಮ ಅಥವಾ ಉಪವಿಧಿಗಳ ಅಥವಾ ಮಾಡಲಾದ ಅಥವಾ ಯಾವುದನ್ನಾದರೂ ಕೈಗೊಂಡ ಅಥವಾ ಬಾಧಕವಾದ ಅಥವಾ ಅಂಥ ಯಾವುದೇ ಕಾನೂನಿನ ಅಡಿಯಲ್ಲಿ ಈಗಾಗಲೇ ಆರ್ಜನೆಯಾಗಿರುವ, ಪ್ರಾಪ್ತವಾದ ಅಥವಾ ವಹಿಸಿರುವ ಯಾವುದೇ ಹಕ್ಕು, ವಿಶೇಷ ಸವಲತ್ತು, ಬಾಧ್ಯತೆ ಅಥವಾ ಹೊಣೆಗಾರಿಕೆಗಳ ಪೂರ್ವ ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲ.

ಅನುಸೂಚಿ

(3 ಮತ್ತು 4ನೇ ಪ್ರಕರಣವನ್ನು ನೋಡಿ)

| ಕ್ರಮ ಸಂಖ್ಯೆ | ಅಸ್ತಿತ್ವದಲ್ಲಿರುವ ಸ್ಥಳಗಳ ಹೆಸರುಗಳು ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ | ಬದಲಾಯಿಸಿದ ಸ್ಥಳಗಳ ಹೆಸರುಗಳು ಕನ್ನಡ ಮತ್ತು ಇಂಗ್ಲೀಷ್‌ನಲ್ಲಿ |
|---|---|---|
| (1) | (2) | (3) |
| 1. | ಬೆಂಗಳೂರು–BANGALORE | ಬೆಂಗಳೂರು–BENGALURU |
| 2. | ಮಂಗಳೂರು–MANGALORE | ಮಂಗಳೂರು–MANGALURU |
| 3. | ಬೆಳ್ಳಾರಿ–BELLARY | ಬಳ್ಳಾರಿ– BALLARI |
| 4. | ಬಿಜಾಪುರ–BIJAPUR | ವಿಜಯಾಪುರ–VIJAYAPURA |
| 5. | ಬೆಳಗಾಂ–BELGAUM | ಬೆಳಗಾವಿ–BELAGAVI |
| 6. | ಚಿಕ್ಕಮಗಳೂರು–CHIKMAGALUR | ಚಿಕ್ಕಮಗಳೂರು–CHIKKAMAGALURU |
| 7. | ಗುಲಬರ್ಗಾ–GULBARGA | ಕಲಬುರಗಿ–KALABURAGI |
| 8. | ಮೈಸೂರು–MYSORE | ಮೈಸೂರು–MYSURU |
| 9. | ಹೊಸಪೇಟೆ–HOSPET | ಹೊಸಪೇಟೆ–HOSAPETE |
| 10. | ಶಿಮೊಗ–SHIMOGA | ಶಿವಮೊಗ್ಗ–SHIVAMOGGA |
| 11. | ಹುಬ್ಳಿ–HUBLI | ಹುಬ್ಬಳ್ಳಿ–HUBBALLI |
| 12. | ತುಮಕೂರ್–TUMKUR | ತುಮಕೂರು–TUMAKURU |

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ದಿನಾಂಕ:31.10.2014ರ ಅಧಿಸೂಚನೆ ಸಂಖ್ಯೆ: ಆರ್‌ಡಿ 03 ಟಿಎನ್‌ವಿ 2006ರ ಅನ್ವಯ (ಅನುಬಂಧ–1) ಕರ್ನಾಟಕ ಸರ್ಕಾರದ ಕಂದಾಯ ಇಲಾಖೆಯು ಕರ್ನಾಟಕದ ಹನ್ನೆರಡು ಸ್ಥಳಗಳ ಹೆಸರುಗಳನ್ನು ಬದಲಾಯಿಸಿದೆ. ಭಾರತ ಸರ್ಕಾರದ ಗೃಹ ಮಂತ್ರಾಲಯದ ದಿನಾಂಕ:17.10.2014ರ ಪತ್ರ ಸಂಖ್ಯೆ: 11/30/2006–ಎಂ ಮತ್ತು ಜಿ ಹಾಗೂ ಭಾರತ ಸರ್ಕಾರದ ವಿಜ್ಞಾನ ಮತ್ತು ತಂತ್ರಜ್ಞಾನ ಮಂತ್ರಾಲಯದ ದಿನಾಂಕ:30.08.2013ರ ಅಧಿಕೃತ ಜ್ಞಾಪನ ಸಂಖ್ಯೆ: ಎಸ್‌ಎಮ್/28/04/2007ರ ಅನ್ವಯ ಆಡಳಿತ ಇಲಾಖೆಯು ಈ ಬದಲಾವಣೆಗೆ ಕೇಂದ್ರ ಸರ್ಕಾರದಿಂದ ನಿರಾಕ್ಷೇಪಣೆಯನ್ನು ಪಡೆದಿರುತ್ತದೆ. ಆದರೆ ಕರ್ನಾಟಕದಲ್ಲಿ ಜಾರಿಯಲ್ಲಿರುವ ಹಲವಾರು ಕಾನೂನುಗಳಲ್ಲಿ ಸ್ಥಳಗಳ ಹೆಸರುಗಳು ಬದಲಾವಣೆಯಾಗದೇ ಹಾಗೆಯೇ ಉಳಿದಿರುತ್ತವೆ. ಆದುದರಿಂದ, ಕೆಲವು ಸ್ಥಳಗಳ ಹೆಸರುಗಳ ಬದಲಾವಣೆಯ ಅರ್ಥೈಸುವಿಕೆಗಾಗಿ, ಸಿಂಧುತ್ವಕ್ಕಾಗಿ ಮತ್ತು ಉಳಿಸುವಿಕೆಗಾಗಿ ಇದನ್ನು ತಿದ್ದುಪಡಿ ಮಾಡುವುದು ಅವಶ್ಯವೆಂದು ಪರಿಗಣಿಸಲಾಗಿದೆ.

ಆದುದರಿಂದ, ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಟಿ.ಬಿ.ಜಯಚಂದ್ರ**
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಸಣ್ಣ ನೀರಾವರಿ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನ ಸಭೆ

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TWELFTH SESSION**

**THE KARNATAKA ALTERATION OF NAMES OF CERTAIN PLACES BILL, 2016**

**(L.A. Bill No. 32 of 2016)**

A Bill to amend certain Laws to alter the name of the city of Bangalore and certain other places in the State of Karnataka.

Whereas it is expedient to amend certain Laws to alter the name of the city of Bangalore and certain other places in the State of Karnataka for the purposes hereinafter appearing;

Be it enacted by the Karnataka State Legislature in the Sixty- seventh year of Republic of India, as follows:-

**1. Short title and commencement.-** (1) This Act may be called the Karnataka Alteration of names of certain places Act, 2016.

(2) It shall come into force at once.

**2. Definition.-** In this Act, unless the context otherwise requires, "Law" includes any enactment, ordinance, regulation, order, bye-law, rule, scheme, notification or other instruments having the force of law in the whole or any part of the State of Karnataka in respect of which the Karnataka Legislature has competence to make law.

**3. Alteration of names.-** On and from the date of commencement of this Act, for the names of places specified in column (2) of the Schedule occurring in any law in force in the State, the corresponding names specified in column (3) thereof shall be substituted.

4. Construction of references.- Unless the context otherwise requires, any reference to the names of the places referred to in column (2) of the schedule in any Law, after the commencement of this Act be construed as a reference to the corresponding places referred to in column (3) thereof.

**5. Validation and savings.-** Nothing contained in section 3 amending the names specified in column (3) of the Schedule in respect of places specified in column (2) shall affect the previous operation of any notification, order, rule or bye-law issued or made or anything done or suffered under any State enactments as they exist on the date of commencement of this Act, or any right, privilege, obligation or liability already acquired, accrued or incurred under any such law.

**SCHEDULE**
(see section 3 and 4)

| Sl.No. | Existing names of the places in Kannada and English | Altered names of the places in Kannada and English |
|---|---|---|
| (1) | (2) | (3) |
| 1. | ಬೆಂಗಳೂರು–BANGALORE | ಬೆಂಗಳೂರು–BENGALURU |
| 2. | ಮಂಗಳೂರು– MANGALORE | ಮಂಗಳೂರು– MANGALURU |
| 3. | ಬೆಳ್ಳಾರಿ– BELLARY | ಬಳ್ಳಾರಿ– BALLARI |

| Sl.No. | Existing names of the places in Kannada and English | Altered names of the places in Kannada and English |
|---|---|---|
| (1) | (2) | (3) |
| 4. | ಬಿಜಾಪುರ– BIJAPUR | ವಿಜಯಾಪುರ–VIJAYAPURA |
| 5. | ಬೆಳಗಾಂ– BELGAUM | ಬೆಳಗಾವಿ– BELAGAVI |
| 6. | ಚಿಕ್ಕಮಗಳೂರು– CHIKMAGALUR | ಚಿಕ್ಕಮಗಳೂರು– CHIKKAMAGALURU |
| 7. | ಗುಲಬರ್ಗಾ– GULBARGA | ಕಲಬುರಗಿ–KALABURAGI |
| 8. | ಮೈಸೂರು– MYSORE | ಮೈಸೂರು– MYSURU |
| 9. | ಹೊಸಪೇಟೆ– HOSPET | ಹೊಸಪೇಟೆ– HOSAPETE |
| 10. | ಶಿಮೊಗ–SHIMOGA | ಶಿವಮೊಗ್ಗ–SHIVAMOGGA |
| 11. | ಹುಬ್ಬಿ– HUBLI | ಹುಬ್ಬಳ್ಳಿ– HUBBALLI |
| 12. | ತುಮಕೂರ್–TUMKUR | ತುಮಕೂರು–TUMAKURU |

## STATEMENT OF OBJECTS AND REASONS

The Revenue Department, Government of Karnataka had altered the names of twelve places of Karnataka. Vide Notification no: RD 03 TNV 2006, dated: 31.10.2014 (Annexure-1). A No-Objection from the Central Government for this alteration was obtained by the Administrative Department vide Home Ministry, Government of India letter No.11/30/2006-M&G, dated: 17.10.2014 and Ministry of Science and Technology, Government of India O.M No. SM/28/04/2007, dated: 30.08.2013. But the names of places remained unaltered in various Laws in force in Karnataka. Therefore, it is considered necessary to amend the same and for construing, validation and savings of the altered names of certain places.

Hence, the Bill

## FINANCIAL MEMORANDUM

There is no extra expenditure involved in the proposed legislative measure.

**T.B. JAYACHANDRA**
MINISTER FOR LAW, PARLIAMENTARY
AFFAIRS AND MINOR IRRIGATION

**S.Murthy**
Secretary (I/C)
Karnataka Legislative Assembly

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 150

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–IVA | ಬೆಂಗಳೂರು, ಬುಧವಾರ, ನವೆಂಬರ್ ೨೩, ೨೦೧೬ (ಮಾರ್ಗಶಿರ ೨, ಶಕ ವರ್ಷ ೧೯೩೮) | ನಂ. ೧೨೯೯ |
|---|---|---|
| Part–IVA | Bengaluru, Wednesday, November 23, 2016 (Margasira 2, Shaka Varsha 1938) | No. 1299 |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/33/Bill/2016, Bengaluru, Dated: 23.11.2016**

This following Bill was introduced in Legislative Assembly on 23.11.2016

**ಕರ್ನಾಟಕ ವಿಧಾನಸಭೆ**

**ಹದಿನಾಲ್ಕನೇ ವಿಧಾನಸಭೆ**

**ಹನ್ನೆರಡನೇ ಅಧಿವೇಶನ**

**ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ–33)**

ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಅಧಿನಿಯಮ, 1985ನ್ನು ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

**ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಅಧಿನಿಯಮ, 1985ನ್ನು (1985ರ ಕರ್ನಾಟಕ ಅಧಿನಿಯಮ 39) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;**

ಇದು, ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.–** ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ರ (1985ರ ಕರ್ನಾಟಕ ಅಧಿನಿಯಮ 39) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಕರೆಯಲಾಗಿದೆ) 2ನೇ ಪ್ರಕರಣದಲ್ಲಿ,–

(i) (ಇ) ಖಂಡಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಇ) "ನಿಗಮ" ಎಂದರೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ;"

(ii) (ಜೆ) ಖಂಡದಲ್ಲಿ "ಬೆಂಗಳೂರು ನಗರ ಪುರಸಭಾ ನಿಗಮ" ಎಂಬ ಪದಗಳಿಗೆ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳನ್ನು ಮತ್ತು "ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ" ಎಂಬ ಪದಗಳಿಗೆ "ಕರ್ನಾಟಕ ವಿದ್ಯುತ್ ಸರಬರಾಜು ನಿಗಮ ನಿಯಮಿತ" ಎಂಬ ಪದಗಳನ್ನು ಹಾಗೂ "ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯತಿ" ಎಂಬ ಪದಗಳಿಗೆ "ಪಟ್ಟಣ ಪಂಚಾಯತಿ ಅಥವಾ ಗ್ರಾಮ ಪಂಚಾಯತಿ" ಎಂಬ ಪದಗಳನ್ನು ಅನುಕ್ರಮವಾಗಿ ಪ್ರತಿಯೋಜಿಸತಕ್ಕದ್ದು.

**3. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ,–

(i) (ಬಿ) ಖಂಡದಲ್ಲಿ "ನಗರಾಭಿವೃದ್ಧಿಯ" ಎಂಬ ಪದಗಳಿಗೆ "ಬೆಂಗಳೂರು ಅಭಿವೃದ್ಧಿಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(ii) (ಡಿ) ಖಂಡದಲ್ಲಿ "ಬೆಂಗಳೂರು ನಗರ ನಿಗಮ" ಎಂಬ ಪದಗಳಿಗೆ "ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು;

(iii) (ಎಫ್), (ಜಿ), (ಎಚ್), (ಐ) ಮತ್ತು (ಜೆ) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎಫ್) ಪ್ರಾದೇಶಿಕ ಆಯುಕ್ತ, ಬೆಂಗಳೂರು ಪ್ರದೇಶ, ಬೆಂಗಳೂರು;

(ಜಿ) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ;

(ಎಚ್) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ವಸತಿ ಇಲಾಖೆ, ಕರ್ನಾಟಕ ಸರ್ಕಾರ;

(ಎಚ್–1) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ;

(ಐ) ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ;

(ಜೆ) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆಗಳ ಇಲಾಖೆ, ಕರ್ನಾಟಕ ಸರ್ಕಾರ;"

(iv) (ಎಂ), (ಎನ್), (ಒ) ಮತ್ತು (ಪಿ) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಎಂ) ಅಧ್ಯಕ್ಷ, ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮಂಡಳಿ;

(ಎನ್) ಅಧ್ಯಕ್ಷ, ಕರ್ನಾಟಕ ವಿದ್ಯುತ್ ಸರಬರಾಜು ನಿಗಮ ನಿಯಮಿತ;

(ಎನ್–1) ಅಧ್ಯಕ್ಷ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ;

(ಎನ್–2) ಅಧ್ಯಕ್ಷ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ;

(ಒ) ಅಧ್ಯಕ್ಷ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ;

(ಪಿ) ನಿರ್ದೇಶಕ, ಪಟ್ಟಣ ಮತ್ತು ಗ್ರಾಮಾಂತರ ಯೋಜನೆ, ಕರ್ನಾಟಕ ಸರ್ಕಾರ;"

(v) (ಆರ್) ಖಂಡವನ್ನು ಬಿಟ್ಟುಬಿಡತಕ್ಕದ್ದು.

**4. 6ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 6ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (ಎ) ಖಂಡದಲ್ಲಿ "ನಗರಾಭಿವೃದ್ಧಿಯ" ಎಂಬ ಪದಗಳಿಗೆ "ಬೆಂಗಳೂರು ಅಭಿವೃದ್ಧಿಯ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ii) (ಇ), (ಎಫ್), (ಜಿ), (ಎಚ್) ಮತ್ತು (ಐ) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಇ) ಮೇಯರ್, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ;

(ಎಫ್) ಆಯುಕ್ತ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ;

(ಜಿ) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ವಸತಿ ಇಲಾಖೆ, ಕರ್ನಾಟಕ ಸರ್ಕಾರ;

(ಜಿ–1) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ;

(ಎಚ್) ಅಪರ ಮುಖ್ಯ ಕಾರ್ಯದರ್ಶಿ ಅಥವಾ ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಆರ್ಥಿಕ ಇಲಾಖೆ, ಕರ್ನಾಟಕ ಸರ್ಕಾರ;

(ಐ) ಪ್ರಧಾನ ಕಾರ್ಯದರ್ಶಿ ಅಥವಾ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ;"

(iii) (ಕೆ) ಮತ್ತು (ಎಲ್) ಖಂಡಗಳಿಗೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(ಕೆ) ನಿರ್ದೇಶಕ, ಪಟ್ಟಣ ಮತ್ತು ಗ್ರಾಮಾಂತರ ಯೋಜನೆ, ಕರ್ನಾಟಕ ಸರ್ಕಾರ;

(ಎಲ್) ಪ್ರಾದೇಶಿಕ ಆಯುಕ್ತ, ಬೆಂಗಳೂರು ಪ್ರದೇಶ, ಬೆಂಗಳೂರು;"

**5. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿನ (ix) ಖಂಡದಲ್ಲಿ "ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಳಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ" ಎಂಬ ಪದಗಳಿಗೆ "ಕರ್ನಾಟಕ ಕೊಳಚೆ ಪ್ರದೇಶ ಅಭಿವೃದ್ಧಿ ಮಂಡಲಿ, ಕರ್ನಾಟಕ ವಿದ್ಯುಚ್ಛಕ್ತಿ ಸರಬರಾಜು ನಿಗಮ ನಿಯಮಿತ ಮತ್ತು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

ಆಡಳಿತದ ಹಿತದೃಷ್ಟಿಯಿಂದ ಪ್ರಾಧಿಕಾರವನ್ನು ಪ್ರತಿನಿಧಿಸುವ ಕೆಲವು ಹುದ್ದೆಗಳ ಅಥವಾ ಪ್ರಾಧಿಕಾರಿಗಳ ಪದನಾಮಗಳನ್ನು ಬದಲಾಯಿಸುವುದಕ್ಕೆ ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ನ್ನು (1985ರ ಕರ್ನಾಟಕ ಅಧಿನಿಯಮ 39) ತಿದ್ದುಪಡಿ ಮಾಡುವುದು ಅವಶ್ಯಕವೆಂದು ಪರಿಗಣಿಸಿದೆ.

ಆದ್ದರಿಂದ ಈ ವಿಧೇಯಕ.

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮವು ಯಾವುದೇ ಹೆಚ್ಚಿನ ವೆಚ್ಚವನ್ನು ಒಳಗೊಂಡಿರುವುದಿಲ್ಲ.

**ಕೆ.ಜೆ. ಜಾರ್ಜ್**
ಬೆಂಗಳೂರು ಅಭಿವೃದ್ಧಿ ಮತ್ತು
ಪಟ್ಟಣ ಯೋಜನೆ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನಸಭೆ

**ಅನುಬಂಧ**
**ಬೆಂಗಳೂರು ಮಹಾನಗರ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅಧಿನಿಯಮ, 1985ರ (1985ರ ಕರ್ನಾಟಕ ಅಧಿನಿಯಮ 39)**
**ಉದ್ಧೃತ ಭಾಗ**

**xxx xxx xxx xxx**

**2. ಪರಿಭಾಷೆಗಳು.–** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯ ಪಡಿಸಿದ ಹೊರತು,–

(ಇ) "ನಿಗಮ" ಎಂದರೆ, ಬೆಂಗಳೂರು ನಗರ ನಿಗಮ;

**xxx xxx xxx xxx**

(ಜೆ) "ಸ್ಥಳೀಯ ಪ್ರಾಧಿಕಾರ" ಎಂದರೆ, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ರಚಿತವಾದ ಅಥವಾ ಮುಂದುವರೆದಿರುವ ಬೆಂಗಳೂರು ನಗರ ಪುರಸಭಾ ನಿಗಮ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಜಿಲ್ಲಾ ಪರಿಷತ್ತು, ಪುರಸಭಾ ಪರಿಷತ್ತು, ನೈರ್ಮಲ್ಯ ಮಂಡಲಿ ಅಥವಾ ಮಂಡಲ ಪಂಚಾಯಿತಿ;

**xxx xxx xxx xxx**

**3. ಪ್ರಾಧಿಕಾರದ ರಚನೆ ಮತ್ತು ನಿಗಮನ.– xxx xxx xxx**

(3) ಪ್ರಾಧಿಕಾರವು ಈ ಮುಂದಿನ ಸದಸ್ಯರುಗಳನ್ನು ಹೊಂದಿರತಕ್ಕದ್ದು, ಎಂದರೆ:–

**xxx xxx xxx xxx**

(ಬಿ) ನಗರಾಭಿವೃದ್ಧಿಯ ಪ್ರಭಾರದಲ್ಲಿರುವ ಮಂತ್ರಿ ಅವರು ಉಪಾಧ್ಯಕ್ಷರಾಗಿರತಕ್ಕದ್ದು;

**xxx xxx xxx xxx**

(ಡಿ) ಮೇಯರ್, ಬೆಂಗಳೂರು ನಗರ ನಿಗಮ;

**xxx xxx xxx xxx**

(ಎಫ್) ಡಿವಿಷನಲ್ ಕಮೀಷನರ್, ಬೆಂಗಳೂರು ವಿಭಾಗ, ಬೆಂಗಳೂರು;

(ಜಿ) ಕಾರ್ಯದರ್ಶಿ, ಹಣಕಾಸು ಇಲಾಖೆ, ಕರ್ನಾಟಕ ಸರ್ಕಾರ;

(ಎಚ್) ಕಾರ್ಯದರ್ಶಿ, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ;

(ಐ) ಕಾರ್ಯದರ್ಶಿ, ಲೋಕೋಪಯೋಗಿ, ನೀರು ಪೂರೈಕೆ ಪ್ರದೇಶಾಭಿವೃದ್ಧಿ ಮತ್ತು ವಿದ್ಯುಚ್ಛಕ್ತಿ ಇಲಾಖೆ, ಕರ್ನಾಟಕ ಸರ್ಕಾರ;

(ಜೆ) ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಕರ್ನಾಟಕ ಸರ್ಕಾರ;

(ಕೆ) ಅಧ್ಯಕ್ಷ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ;

(ಎಲ್) ಅಧ್ಯಕ್ಷ, ಕರ್ನಾಟಕ ಗೃಹ ನಿರ್ಮಾಣ ಮಂಡಲಿ;

(ಎಂ) ಅಧ್ಯಕ್ಷ, ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಲಿ;

(ಎನ್) ಅಧ್ಯಕ್ಷ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ;

(ಒ) ಅಧ್ಯಕ್ಷ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ;

(ಪಿ) ನಗರ ಯೋಜನಾ ನಿರ್ದೇಶಕ, ಕರ್ನಾಟಕ ಸರ್ಕಾರ;

**xxx xxx xxx xxx**

(ಆರ್) ಅಧ್ಯಕ್ಷ, ಬೆಂಗಳೂರು ನಗರ ಕಲಾ ಆಯೋಗ;

**xxx xxx xxx xxx**

6. ಕಾರ್ಯಕಾರಿ ಸಮಿತಿ.- (1) ಪ್ರಾಧಿಕಾರದ (ಕೆಳಕಂಡವರನ್ನು ಹೊಂದಿರುವ) ಒಂದು ಕಾರ್ಯಕಾರಿ ಸಮಿತಿಯಿರತಕ್ಕದ್ದು: -

(ಎ) ನಗರಾಭಿವೃದ್ಧಿಯ ಪ್ರಭಾರದಲ್ಲಿರುವ ಮಂತ್ರಿ, ಅವರು ಅಧ್ಯಕ್ಷರಾಗಿರತಕ್ಕದ್ದು;

**xxx xxx xxx xxx**

(ಇ) ಮೇಯರ್, ಬೆಂಗಳೂರು ನಗರ ನಿಗಮ;

(ಎಫ್) ಆಯುಕ್ತರು, ಬೆಂಗಳೂರು ನಗರ ನಿಗಮ;

(ಜಿ) ಕಾರ್ಯದರ್ಶಿ, ವಸತಿ ಮತ್ತು ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರ;

(ಎಚ್) ಕಾರ್ಯದರ್ಶಿ, ಹಣಕಾಸು ಇಲಾಖೆ, ಕರ್ನಾಟಕ ಸರ್ಕಾರ;

(ಐ) ಕಾರ್ಯದರ್ಶಿ, ಲೋಕೋಪಯೋಗಿ, ನೀರು ಪೂರೈಕೆ ಪ್ರದೇಶಾಭಿವೃದ್ಧಿ ಮತ್ತು ವಿದ್ಯುಚ್ಛಕ್ತಿ ಇಲಾಖೆ;

(ಜೆ) ಅಧ್ಯಕ್ಷ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ;

(ಕೆ) ಪಟ್ಟಣ ಯೋಜನೆಯ ನಿರ್ದೇಶಕ, ಕರ್ನಾಟಕ ಸರ್ಕಾರ;

(ಎಲ್) ಡಿವಿಷನಲ್ ಕಮೀಷನರ್, ಬೆಂಗಳೂರು ವಿಭಾಗ, ಬೆಂಗಳೂರು.

**xxx xxx xxx xxx**

**9. ಪ್ರಾಧಿಕಾರದ ಅಧಿಕಾರಗಳು ಮತ್ತು ಪ್ರಕಾರ್ಯಗಳು.-** (1) ಈ ಅಧಿನಿಯಮದ ಉಪಬಂಧಗಳು ಮತ್ತು ಅದರ ಅಡಿಯಲ್ಲಿ ರಚಿಸಲಾದ ನಿಯಮಗಳಿಗೊಳಪಟ್ಟು ಪ್ರಾಧಿಕಾರದ ಪ್ರಕಾರ್ಯಗಳು ಈ ಮುಂದಿನಂತಿರತಕ್ಕದ್ದು: -

**xxx xxx xxx xxx**

(ix) ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಕೈಗಾರಿಕಾ ಪ್ರದೇಶಗಳ ಅಭಿವೃದ್ಧಿ ಮಂಡಲಿ, ಬೆಂಗಳೂರು ನಗರ ನಿಗಮ, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಲಿ, ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನ ಮಂಡಲಿ, ಕರ್ನಾಟಕ ವಿದ್ಯುಚ್ಛಕ್ತಿ ಮಂಡಲಿ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಮತ್ತು ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಅಭಿವೃದ್ಧಿ ಚಟುವಟಿಕೆಗಳಿಗೆ ಸಂಬಂಧಪಡುವಷ್ಟರ ಮಟ್ಟಿಗೆ ಅಂಥ ಇತರ ನಿಕಾಯಗಳ ಚಟುವಟಿಕೆಗಳನ್ನು ಸಮನ್ವಯಗೊಳಿಸುವುದು.

**xxx xxx xxx xxx**

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TWELFTH SESSION**

**THE BANGALORE METROPOLITAN REGION DEVELOPMENT AUTHORITY (AMENDMENT) BILL, 2016**
**(L.A. Bill No. 33 of 2016)**

A Bill further to amend the Bangalore Metropolitan Region Development Authority Act, 1985.

Whereas, it is expedient further to amend the Bangalore Metropolitan Region Development Authority Act, 1985 (Karnataka Act 39 of 1985) for the purposes hereinafter appearing;

Be it enacted by the Karnataka State Legislature in the sixty-seventh year of the Republic of India as follows, namely:-

**1. Short title and commencement.-** (1) This Act may be called the Bangalore Metropolitan Region Development Authority (Amendment) Act, 2016.

(2) It shall come into force at once.

**2. Amendment of section 2.-** In section 2 of the Bangalore Metropolitan Region Development Authority Act, 1985 (Karnataka Act 39 of 1985) (hereinafter referred to as the principal Act),-

(i) for clause (e), the following shall be substituted, namely:-

"(e) "Corporation" means the Bruhat Bangaluru Mahanagara Palike";

(ii) in clause (j), for the words "the City of Bangalore Municipal Corporation", the words "the Bruhat Bangalore Mahanagara Palike" and for the words "the Karnataka Electricity Board", the words "the Karnataka Power Transmission Corporation Limited" and for the words "Sanitary Board or Mandal Panchayath" the words "Town Panchayath or Grama Panchayath" shall respectively be substituted.

**3. Amendment of section 3.-** In section 3 of the principal Act, in sub-section (3),-

(i) in clause (b), for the words "Urban Development", the words "Bengaluru Development" shall be substituted;

(ii) in clause (d), for the words "Corporation of the City of Bangalore", the words "Bruhat Bangalore Mahanagara Palike" shall be substituted;

(iii) for clauses (f), (g), (h), (i), and (j), the following shall be substituted, namely:-

"(f) the Regional Commissioner, Bengaluru Region, Bengaluru;

(g) the Additional Chief Secretary or Principal Secretary or Secretary, Finance Department, Government of Karnataka;

(h) the Additional Chief Secretary or Principal Secretary or Secretary, Housing Department, Government of Karnataka;

(h-1) the Additional Chief Secretary or Principal Secretary or Secretary, Urban Development Department, Government of Karnataka;

(i) the Principal Secretary or Secretary, Public Works, Ports and Inland Water Transport Department, Government of Karnataka;

(j) the Additional Chief Secretary or Principal Secretary or Secretary, Commerce and Industries Department, Government of Karnataka;"

(iv) for clauses (m), (n), (o) and (p), the following shall be substituted, namely:-

"(m) the Chairman, Karnataka Slum Development Board;

(n) the Chairman, Karnataka Power Transmission Corporation Limited;

(n1) the Chairman, Bangalore Electricity Supply Company;

(n2) the Chairman, the Karnataka State Road Transport Corporation;

(o) the Chairman, Bengaluru Metropolitan Transport Corporation;

(p) the Director of Town and Country Planning, Government of Karnataka;"

(v) clause (r) shall be omitted.

**4. Amendment of section 6.-** In section 6 of the principal Act, in sub section (1),-

(i) in clause (a) for the words "Urban Development", the words "Bengaluru Development" shall be substituted.

(ii) for clauses (e), (f), (g), (h) and (i) the following shall be substituted, namely:-

"(e) the Mayor Bruhat Bangalore Mahanagara Palike;

(f) the Commissioner, Bruhat Bangalore Mahanagara Palike;

(g) the Additional Chief Secretary or Principal Secretary or Secretary, Housing Department, Government of Karnataka

(g-1) the Additional Chief Secretary or Principal Secretary or Secretary, Urban Development Department, Government of Karnataka;

(h) the Additional Chief Secretary or Principal Secretary or Secretary, Finance Department, Government of Karnataka;

(i) the Principal Secretary or Secretary, Public Works, Ports and Inland Water Transport Department, Government of Karnataka;"

(iii) for clauses (k) and (l), the following shall be substituted, namely:-

"(k) the Director of Town and Country Planning, Government of Karnataka;

(l) the Regional Commissioner, Bengaluru Region, Bengaluru;"

**5. Amendment of section 9**.- In section 9 of the principal Act, in sub-section (1), in clause (ix) for the words "The Karnataka Slum Clearance Board, the Karnataka Electricity Board," the words "the Karnataka Slum Development Board and the Karnataka Power Transmission Corporation limited and Bangalore Electricity Supply Company" shall be substituted.

**STATEMENT OF OBJECTS AND REASONS**

It is considered necessary to amend the Bangalore Metropolitan Region Development Authority Act, 1985 (Karnataka Act 39 of 1985) to change the nomenclature of the some posts or Authorities representing the Authority, in the interest of Administration.

Hence, the Bill.

**FINANCIAL MEMORANDUM**

There is no extra expenditure involved in the proposed legislative measure.

**K.J. George**
Minister for Bengaluru Development
and Town Planning

**S.Murthy**
Secretary (I/C)
Karnataka Legislative Assembly

**ANNEXURE**
**THE BANGALORE METROPOLITAN REGION DEVELOPMENT AUTHORITY ACT, 1985**
**(KARNATAKA ACT 39 OF 1985)**

**xx xx xx**

**2. Definitions.-** In this Act, unless the context otherwise requires,-

**xx xx xx**

(e)"Corporation" means the Corporation of the City of Bangalore;

**xx xx xx**

(j) ''local authority'' means the City of Bangalore Municipal Corporation, the Bangalore Development Authority, the Bangalore Water Supply and Sewerage Board, a Sanitary Board, the Karnataka Electricity Board, the Karnataka Road Transport Corporation, a Zilla Parishad, a Municipal Council, a Sanitary Board or a Mandal Panchayat constituted or continued under any law for the time being in force;

**xx xx xx**

**3. Constitution and incorporation of the Authority.- xx xx xx**

(3) The Authority shall consist of the following members, namely:-

**xx xx xx**

(b) the Minister in charge of Urban Development who shall be the Vice-Chairman; **xx xx xx**

(d) the Mayor, Corporation of the City of Bangalore

**xx xx xx**

(f) the Divisional Commissioner, Bangalore Division, Bangalore.

(g) the Secretary, Finance Department, Government of Karnataka;

(h) the Secretary, Housing and Urban Development Department, Government of Karnataka;

(i) the Secretary, Public Works Command Area Development and Electricity Department, Government of Karnataka;

(j) the Secretary, Commerce and Industries Department, Government of Karnataka; **xx xx xx**

(m) the Chairman, Karnataka Slum Clearance Board;

(n) the Chairman, Karnataka Electricity Board;

(o) the Chairman, Karnataka State Road Transport Corporation;

(p) the Director of Town Planning, Government of Karnataka;

**xx xx xx**

(r) the Chairman, Bangalore Urban Art Commission;

**xx xx xx**

**6. Executive Committee.-** (1) There shall be an executive committee of the Authority consisting of,-

(a) the Minister in charge of Urban Development, who shall be the Chairman; **xx**

**xx** **xx**

(e) the Mayor, Corporation of the City of Bangalore;
(f) the Commissioner, Corporation of the City of Bangalore;
(g) the Secretary, Housing and Urban Development, Government of Karnataka;
(h) the Secretary, Finance Department, Government of Karnataka;
(i) the Secretary, Public Works, Command Area Development and Electricity, Department; **xx**

**xx** **xx**

(k) the Director of Town Planning, Government of Karnataka;
(l) the Divisional Commissioner, Bangalore Division, Bangalore.

**xx** **xx** **xx**

**9. Powers and functions of the Authority.-** (1) Subject to the provisions of this Act and the rules made thereunder the functions of the Authority shall be,-

**xx** **xx** **xx**

(ix) to co-ordinate the activities of the Bangalore Development Authority, the Corporation of the City of Bangalore, the Bangalore Water Supply and Sewerage Board, the Karnatka Slum Clearance Board, the Karnataka Electricity Board, the Karnataka Industrial Areas Development Board, the Karnataka State Road Transport Corporation and such other bodies as are connected with developmental activities in the Bangalore Metropolitan Region.

**xx** **xx** **xx**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು: 150

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ-*IVA* | ಬೆಂಗಳೂರು, ಬುಧವಾರ, ನವೆಂಬರ್ ೨೩, ೨೦೧೬ (ಮಾರ್ಗಶಿರ ೨, ಶಕ ವರ್ಷ ೧೯೩೮) | ನಂ. ೧೩೦೦ |
|---|---|---|
| ***Part-IVA*** | ***Bengaluru, Wednesday, November 23, 2016 (Margasira 2, Shaka Varsha 1938)*** | ***No. 1300*** |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/34/Bill/2016, Bengaluru, Dated: 23.11.2016**

This following Bill was introduced in Legislative Assembly on 23.11.2016

**ಕರ್ನಾಟಕ ವಿಧಾನಸಭೆ**

**ಹದಿನಾಲ್ಕನೇ ವಿಧಾನಸಭೆ**

**ಹನ್ನೆರಡನೇ ಅಧಿವೇಶನ**

**ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಅರಣ್ಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ಹಾಗೂ ಸ್ಥಳನಿಯುಕ್ತಿಗಳ ನಿಯಂತ್ರಣ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ-34)**

ಅಪಾಯ ಸಂಭವವಿರುವ (critical) ಮತ್ತು ಇತರ ಪ್ರದೇಶಗಳಲ್ಲಿನ ಅರಣ್ಯ ಇಲಾಖೆಯ ಅರಣ್ಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಗಳ ವರ್ಗಾವಣೆ ಹಾಗೂ ಸ್ಥಳನಿಯುಕ್ತಿಯ ನಿಯಂತ್ರಣಕ್ಕಾಗಿ ಉಪಬಂಧವನ್ನು ಕಲ್ಪಿಸಲು ಒಂದು ವಿಧೇಯಕ.

ಅಪಾಯ ಸಂಭವವಿರುವ (critical) ಮತ್ತು ಇತರ ಪ್ರದೇಶಗಳಲ್ಲಿನ ಅರಣ್ಯ ಇಲಾಖೆಯ ಅರಣ್ಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಗಳ ವರ್ಗಾವಣೆಯ ನಿಯಂತ್ರಣಕ್ಕಾಗಿ ಮತ್ತು ಅದಕ್ಕೆ ಸಂಬಂಧಿಸಿದ ಅಥವಾ ಆನುಷಂಗಿಕವಾದ ವಿಷಯಗಳಿಗೆ ಉಪಬಂಧವನ್ನು ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನ ಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಅರಣ್ಯ ಅಧಿಕಾರಿಗಳು ಮತ್ತು ಇತರ ಸಿಬ್ಬಂದಿಯ ವರ್ಗಾವಣೆ ಹಾಗೂ ಸ್ಥಳನಿಯುಕ್ತಿಗಳ ನಿಯಂತ್ರಣ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(1) "ನೇಮಕಾತಿ" ಎಂದರೆ, ಅರಣ್ಯ ಅಧಿಕಾರಿಗಳು ಅಥವಾ ಇತರ ಸಿಬ್ಬಂದಿಗಳ ಸ್ಥಾನಪನ್ನದ ಆಧಾರದ ಮೇಲೆ ನೇರ ನೇಮಕಾತಿಯ ಅಥವಾ ಬಡ್ತಿಯ ಮೂಲಕ ಮಾಡಿದ ನೇಮಕಾತಿ;

(2) "ನೇಮಕಾತಿ ಪ್ರಾಧಿಕಾರ" ಎಂದರೆ, ಸಂಬಂಧಿಸಿದ ವೃಂದಗಳಿಗೆ ನೇಮಕಾತಿ ಮಾಡುವುದಕ್ಕೆ ಸಕ್ಷಮವಾದ ಪ್ರಾಧಿಕಾರ;

## Schedule-I

| Sl. No. | Name of the General Duty Medical Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | Dr. Akshatha C.M., PHC, Pandarahalli, Chitradurga Taluk & Dist. | ಸಿಬ್ಬಂದಿ(1)17/11–12, ದಿನಾಂಕ:24.07.2012 | 11.03.1987 | 01.08.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 2 | Dr. Mohammad Nijamuddin G., PHC, Hitnal, Gangavati Taluk, Koppal Dist. | ಸಿಬ್ಬಂದಿ(1)157/2011–12 ದಿನಾಂಕ: 02.08.2012 | 19.06.1985 | 03.08.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 3 | Dr. Sri Ranga Koli, PHC, Byakuda, Rayabag Taluk, Belgaum Dist. | ಸಿಬ್ಬಂದಿ(1):229:2011–12 ದಿನಾಂಕ: 14.08.2012 | 20.02.1985 | 30.08.2012 | General Duty Medical Officer | 28100-700-28800-800-33600-900-39000-1050-43300-1200-50100 | CAT-1 | |
| 4 | Dr. Puneeth C.M., PHC, Ravanduru, Piriyapatna Taluk, Mysore Dist. | ಸಿವಿ(1)48/11–12, ದಿನಾಂಕ: 18.08.2012 | 08.06.1982 | 01.09.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 5 | Dr. Rohith. B.T., PHC, Hirikalale, K.R.Pet Taluk, Mandya Dist. | ಸಿಬ್ಬಂದಿ(1)208/2012–13, ದಿನಾಂಕ:11.09.2012 | 06.07.1987 | 13.09.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |

| Sl. No. | Name of the General Duty Medical Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 6 | Dr. Madhu S., PHC, Honnavara, Nagamangala Taluk, Mandya Dist | ಸಿಬ್ಬಂದಿ(1)208/2012–13, ದಿನಾಂಕ:11.09.2012 | 10.06.1987 | 15.09.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 7 | Dr. Rajeshwari, PHC, Ratakal, Chincholi Taluk, Kalaburgi Dist. | ಜೆಆ/ಗು/ಡಿಹೆಚ್‌ಓ:ಸಿಆರ್:33: 12–13, ದಿನಾಂಕ: 30.10.2012 | 04.09.1985 | 01.11.2012 | General Duty Medical Officer | 28100-700-28800-800-33600-900-39000-1050-43300-1200-50100 | SC | |
| 8 | Dr. Gururaja, PHC, Musalapur, Gangavati Taluk, Koppal Dist. | ಸಿಬ್ಬಂದಿ(1)230/2012–13 ದಿನಾಂಕ: 19.11.2012 | 01.02.1973 | 19.11.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 9 | Dr. K.Harikrishna, PHC, Koladevi (Rural), Mulabagal Taluk, Kolar Dist. | ಜಿಆಕುಕ/ಕೋ/ಸಿ(1)30/2011–12, ದಿನಾಂಕ:03.12.2012 | 27.01.1986 | 05.12.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 10 | Dr. Raveendra Babu K., PHC, Madihalli (Rural), Harapanahalli Taluk, Davanagere Dist. | ಜಿಆದಾ/ಸಿಶಾ(1)/582/12–13, ದಿನಾಂಕ:17.12.2012 | 14.07.1986 | 17.12.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 11 | Dr. Bharat Kumar, PHC, Mustura, Gangavati Taluk, Koppal Dist. | ಸಿಬ್ಬಂದಿ(1)249/2012–13 ದಿನಾಂಕ: 19.12.2012 | 29.06.1988 | 19.12.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |

| Sl. No. | Name of the General Duty Medical Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 12 | Dr. Vishwanatha, PHC, Malla-B, Surapura Taluk, Yadagir Dist. | ಸಿಬ್ಬಂದಿ(1)155/2012–13, ದಿನಾಂಕ: 17.12.2012. | 01.06.1988 | 20.12.2012 | General Duty Medical Officer | 28100-700-28800-800-33600-900-39000-1050-43300-1200-50100 | 2A | |
| 13 | Dr Sushishta Ganachari, PHC, Kumbaravada, Joida Taluk, U.K.Dist | ಸಿಬ್ಬಂದಿ/304/12–13, ದಿನಾಂಕ: 12.03.2013 | 10.02.1987 | 22.12.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 14 | Dr. Shamina Begum, PHC, Petammapura, Surapura Taluk, Yadagir Dist. | ಸಿಬ್ಬಂದಿ(1)155/2012–13, ದಿನಾಂಕ: 17.12.2012. | 21.04.1984 | 24.12.2012 | General Duty Medical Officer | 28100-700-28800-800-33600-900-39000-1050-43300-1200-50100 | 2B | |
| 15 | Dr. Ravindragoud Patil, PHC, Shiragod, Hanagal Taluk, Haveri Dist | ಸಿ–1 ವಹಿ–1913/2012–13, ದಿನಾಂಕ: 19.12.2012 | 01.06.1984 | 24.12.2012 | General Duty Medical Officer | 28100-700-28800-800-33600-900-39000-1050-43300-1200-50100 | 3B | |
| 16 | Dr. Santosh A, PHC, Beturu Palya, Hiriyuru Taluk, Chitradurga Dist. | ಸಿಬ್ಬಂದಿ(1)17/11–12, ದಿನಾಂಕ:24.07.2012 | 15.12.1987 | 27.12.2012 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 17 | Dr. Ranjith G., PHC, Kemmannu (Rural), Udupi Dist. | ಜೆಆರ್ಓ:ನೇಮಕಾತಿ:01/11–12, ದಿನಾಂಕ: 31.12.2012 | 17.01.1988 | 03.01.2013 | General Duty Medical Officer | 28100-700-28800-800-33600-900-39000-1050-43300-1200-50100 | SC | |

| Sl. No. | Name of the General Duty Medical Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 18 | Dr. Mohammad ayaja Hussain, PHC, Nidagunda, Chincholi Taluk, Kalaburgi Dist. | ಜೆಆ/ಗು/ಡಿಹೆಚ್ಓ:ಸಿಆರ್:33: 12–13, ದಿನಾಂಕ: 10.01.2013 | 12.09.1984 | 15.01.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 19 | Dr. Deepak K.R., PHC, Hundiganal, Arasikere Taluk, Hassan Dist. | ಆಕುಕ/458/ಹೆಚ್ಎಸ್ಹೆಚ್/2012, ದಿನಾಂಕ: 19.10.2012 | 10.11.1984 | 18.01.2013 | General Duty Medical Officer | 28100-700-28800-800-33600-900-39000-1050-43300-1200-50100 | 2A | |
| 20 | Dr. Vijaya Kurennavar, PHC, Nadhi Ingalagaon, Athani Taluk, Belagavi Dist | ಸಿಬ್ಬಂದಿ(1):289:2012–13 ದಿನಾಂಕ: 01.02.2013 | 30.05.1987 | 07.02.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 21 | Dr. Deepaka, PHC, Chandanakera, Chincholi Taluk, Kalaburgi Dist. | ಜೆಆ/ಗು/ಡಿಹೆಚ್ಓ:ಸಿಆರ್:33: 12–13, ದಿನಾಂಕ: 07.02.2013 | 19.08.1987 | 07.02.2013 | General Duty Medical Officer | 28100-700-28800-800-33600-900-39000-1050-43300-1200-50100 | 3B | |
| 22 | Dr. Girish H.S., PHC, Antaragange, Bhadravati Taluk, Shivamogga Dist. | ಡಿಸಿ(1)ಪಿಆರ್(1) 43/2012–13 | 02.06.1971 | 11.02.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 23 | Dr. Srinivas B.K., PHC, Ratnapuri, Hunasuru Taluk, Mysore Dist. | ಸಿವಿ(1)48/11–12, ದಿನಾಂಕ: 18.08.2012 | 06.09.1976 | 14.03.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |

| Sl. No. | Name of the General Duty Medical Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 24 | Dr. Veena D,<br>PHC Bannikuppe<br>Ramanagara Dist. | ಅಭಿವೃದ್ಧಿ/29/12–13,<br>ದಿನಾಂಕ: 14.03.2013 | 08.07.1983 | 18.03.2013 | General Duty Medical Officer | 28100-700-28800-800-33600-900-39000-1050-43300-1200-50100 | SC | |
| 25 | Dr. Jagadish K.D., PHC, Hudikere, Virajapete Taluk, Kodagu Dist. | ಇಎಸ್‌ಟಿ(1)212/11–12,<br>ದಿನಾಂಕ: 14.03.2013. | 25.05.1989 | 22.03.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |
| 26 | Dr. Priya Gonsalvis, PHC, Murudeshwara, Bhatkal Taluk, U.K. Dist. | ಸಿಬ್ಬಂದಿ/304/12–13, ದಿನಾಂಕ: 12.03.2013 | 03.04.1986 | 01.04.2013 | General Duty Medical Officer | 28100-700-28800-800-33600-900-39000-1050-43300-1200-50100 | GM | |

**T.N.NARASIMHARAJU**
Under Secretary to Government,
Health & Family Welfare Department (Services-1).

## Schedule-II

| Sl. No. | Name of the Dental Health Officer and place of working | Contract appointment order and date | Date of Birth | Date of Joining as contract doctor | Post to which observed under these rules | Pay Scale of the post in which observed (In Rs.) | Category | Remarks |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 1 | Dr. Nagaraj Bhargav R., CHC, Ayanuru, Shivamogga Dist. | ಜಿ.ಕ.ಶಿ./ಆ.ಶಾ/ಗುನೆವಿ/ಸಿವಿ (1)ಸಿಆರ್./12/08–09, ದಿನಾಂಕ: 19.09.2008 | 17.10.1980 | 25.09.2008 | Dental Health Officer | 28100-700-28800-800-33600-900-39000-1050-43300-1200-50100 | SC | |

**T.N.NARASIMHARAJU**
Under Secretary to Government,
Health & Family Welfare Department (Services-1).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು:-250

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-IVA | ಬೆಂಗಳೂರು, ಬುಧವಾರ, ನವೆಂಬರ್ ೩೦, ೨೦೧೬ (ಮಾರ್ಗಶಿರ ೯, ಶಕ ವರ್ಷ ೧೯೩೮) | ನಂ. ೧೩೧೪ |
|---|---|---|
| *Part-IVA* | *Bengaluru, Wednesday, November 30, 2016 (Margashira 9, Shaka Varsha 1938)* | *No. 1314* |


**KARNATAKA LEGISLATIVE ASSEMBLY SECRETARIAT**

**NOTIFICATION**

**No. KLA/LGA/33/Bill/2016, Bengaluru, Dated: 30.11.2016**

This following Bill was introduced in Legislative Assembly on 30.11.2016

**ಕರ್ನಾಟಕ ವಿಧಾನಸಭೆ**

**ಹದಿನಾಲ್ಕನೇ ವಿಧಾನಸಭೆ**

**ಹನ್ನೆರಡನೇ ಅಧಿವೇಶನ**

**ಕರ್ನಾಟಕ ಜೀವರಕ್ಷಕ ಮತ್ತು ವೈದ್ಯಕೀಯ ವೃತ್ತಿನಿರತರ (ತುರ್ತು ಸನ್ನಿವೇಶಗಳಲ್ಲಿ ರಕ್ಷಣೆ ಮತ್ತು ನಿಯಂತ್ರಣ) ವಿಧೇಯಕ, 2016**

**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ-35)**

ಜೀವರಕ್ಷಕರು (Good Samaritan) ಮತ್ತು ವೈದ್ಯಕೀಯ ವೃತ್ತಿ ನಿರತರಿಗೆ ಸಮರ್ಥವಾದ ಕಾನೂನು ಪರಿಸರವನ್ನು ಒದಗಿಸುವುದು ಹಾಗೂ ಅವರನ್ನು ಸಿವಿಲ್ ಮತ್ತು ಕ್ರಿಮಿನಲ್ ಹೊಣೆಗಾರಿಕೆಗಳಿಂದ ಹಾಗೂ ಆಸ್ಪತ್ರೆಗಳ ಮತ್ತು ಕ್ಲಿನಿಕ್‌ಗಳ ನಿರ್ಬಂಧದಿಂದ ರಕ್ಷಿಸಲು ಹಾಗೂ ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸಲು ಒಂದು ವಿಧೇಯಕ.

ಜೀವರಕ್ಷಕರು (Good Samaritan) ಮತ್ತು ವೈದ್ಯಕೀಯ ವೃತ್ತಿ ನಿರತರಿಗೆ ಸಮರ್ಥವಾದ ಕಾನೂನು ಪರಿಸರವನ್ನು ಒದಗಿಸುವುದು ಹಾಗೂ ಅವರನ್ನು ಸಿವಿಲ್ ಮತ್ತು ಕ್ರಿಮಿನಲ್ ಹೊಣೆಗಾರಿಕೆಗಳಿಂದ ಹಾಗೂ ಆಸ್ಪತ್ರೆಗಳ ಮತ್ತು ಕ್ಲಿನಿಕ್‌ಗಳ ನಿರ್ಬಂಧದಿಂದ ರಕ್ಷಿಸಲು ಹಾಗೂ ಅದಕ್ಕೆ ಸಂಬಂಧಿಸಿದ ಅಥವಾ ಅದಕ್ಕೆ ಪ್ರಾಸಂಗಿಕವಾದ ವಿಷಯಗಳಿಗಾಗಿ ಉಪಬಂಧ ಕಲ್ಪಿಸುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:-

**ಅಧ್ಯಾಯ-I**

**ಪ್ರಾರಂಭಿಕ**

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.-** (1) ಈ ಅಧಿನಿಯಮವನ್ನು ಕರ್ನಾಟಕ ಜೀವರಕ್ಷಕ ಮತ್ತು ವೈದ್ಯಕೀಯ ವೃತ್ತಿನಿರತರ (ತುರ್ತು ಸನ್ನಿವೇಶಗಳಲ್ಲಿ ರಕ್ಷಣೆ ಮತ್ತು ನಿಯಂತ್ರಣ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.-** ಈ ಅಧಿನಿಯಮದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸದ ಹೊರತು,-

(ಎ) "ಅಪಘಾತ" ಎಂದರೆ, ರಸ್ತೆ, ರೈಲು, ಜಲ ಅಥವಾ ವಾಯು ಅಪಘಾತಗಳನ್ನೊಳಗೊಂಡ ಮತ್ತು ಯಾವೊಬ್ಬ ವ್ಯಕ್ತಿಗೆ ಸಾವು ಅಥವಾ ಗಾಯಗೊಳಿಸುವ ಅಪಾಯಕ್ಕೆ ಕಾರಣವಾಗುವ ಊಹಿಸಲಾಗದ, ಅನಿರೀಕ್ಷಿತ ಅಥವಾ ಉದ್ದೇಶಪೂರ್ವಕವಲ್ಲದೆ ಸಂಭವಿಸಿದ ಒಂದು ಘಟನೆ;

(ಬಿ) "ಯುಕ್ತ ಪ್ರಾಧಿಕಾರ" ಎಂದರೆ, ಸರ್ಕಾರವು ನೇಮಿಸಿದ ಒಂದು ಪ್ರಾಧಿಕಾರ;

(ಸಿ) "ಪ್ರೇಕ್ಷಕ" ಎಂದರೆ, ಅಪಘಾತ ಅಥವಾ ಅಪರಾಧದ ಘಟನೆ ಅಥವಾ ಯಾವುದೇ ಇತರ ತುರ್ತು ಸನ್ನಿವೇಶಗಳಿಗೆ ಪ್ರತ್ಯಕ್ಷ ಸಾಕ್ಷಿಯಾಗಿರುವ, ದಾರಿಹೋಕನನ್ನೂ ಒಳಗೊಂಡಂತೆ ಯಾವೊಬ್ಬ ವ್ಯಕ್ತಿ;

(ಡಿ) "ಸಂಹಿತೆ" ಎಂದರೆ, ದಂಡ ಪ್ರಕ್ರಿಯಾ ಸಂಹಿತೆ, 1973 (1974ರ ಕೇಂದ್ರ ಅಧಿನಿಯಮ 2);

(ಇ) "ತುರ್ತು ನಿಗಾ" ಎಂದರೆ, ಅಪಘಾತ ಅಥವಾ ಅಪರಾಧದ ಘಟನೆ ಅಥವಾ ಯಾವುದೇ ಇತರ ತುರ್ತು ಸನ್ನಿವೇಶಗಳಲ್ಲಿ, ಗಾಯಾಳುವಿಗೆ ಅಪರಾಧದ ಘಟನಾ ಸ್ಥಳದಲ್ಲಿ ಅಥವಾ ನೈಜ ವೈದ್ಯಕೀಯ ಚಿಕಿತ್ಸೆ ಕೊಡಿಸಬಹುದಾದ ಸ್ಥಳಕ್ಕೆ ಪಯಣಿಸುವ ಸಂದರ್ಭದಲ್ಲಿ ಅಥವಾ ಆಸ್ಪತ್ರೆಯ ಒಳಗೆ ಪ್ರಥಮ ಚಿಕಿತ್ಸಾ ಸಲಹೆ ಅಥವಾ ನೆರವು ನೀಡುವ ಯಾವುದೇ ಸಂದರ್ಭೋಚಿತ ಕ್ರಮ;

(ಎಫ್) "ತುರ್ತು ಸನ್ನಿವೇಶಗಳು" ಎಂದರೆ, ತತ್‌ಕ್ಷಣದ ವೈದ್ಯೋಪಚಾರವನ್ನು ನೀಡದಿದ್ದಾಗ ಅಪಾಯ ಸಂಭವದಿಂದ ಬಾಧಿತನಾದ ಅಥವಾ ದೈಹಿಕ ಚಟುವಟಿಕೆಗಳ ಗಂಭೀರ ದುರ್ಬಲತೆಗೆ ಅಥವಾ ದೇಹದ ಯಾವುದೇ ಅಂಗ ಅಥವಾ ಭಾಗದ ಗಂಭೀರ ನಿಷ್ಕ್ರಿಯತೆಗೆ ಒಳಗಾದ ವ್ಯಕ್ತಿಯ ಆರೋಗ್ಯ ಮತ್ತು ಜೀವಕ್ಕೆ ಸಾಕಷ್ಟು ಹಾನಿಯುಂಟಾಗುವ, ಸಾಕಷ್ಟು ಗಂಭೀರ ಪರಿಸ್ಥಿತಿಯ ಲಕ್ಷಣಗಳಿಗೆ ದೂಡುವಂಥ ಅಂಥ ಸ್ವರೂಪದನ್ನು ತಾನಾಗಿಯೇ ಸ್ಪಷ್ಟಪಡಿಸುವ ವೈದ್ಯಕೀಯ ಪರಿಸ್ಥಿತಿ;

(ಜಿ) "ಪ್ರಥಮ ಚಿಕಿತ್ಸೆ" ಎಂದರೆ, ಅಪಘಾತ ಅಥವಾ ಅಪ್ಪಳಿಸುವಿಕೆ ಅಥವಾ ಅಪರಾಧದ ಘಟನೆ ಅಥವಾ ಯಾವುದೇ ಇತರ ತುರ್ತು ಸನ್ನಿವೇಶದಲ್ಲಿ ಗಾಯಾಳುವಿಗೆ ಯಾವುದೇ ನಿರ್ಣಾಯಕ ಚಿಕಿತ್ಸೆಗೂ ಮೊದಲು ಆತನ ಪರಿಸ್ಥಿತಿಯನ್ನು ಸ್ಥಿರಗೊಳಿಸಲು ವೈದ್ಯಕೀಯ ವೃತ್ತಿನಿರತರನ್ನೂ ಒಳಗೊಂಡಂತೆ ಯಾವೊಬ್ಬ ವ್ಯಕ್ತಿಯ ಮೂಲಕ, ನೀಡಲಾದ ತುರ್ತು ಪ್ರಾಥಮಿಕ ನಿಗಾ;

(ಎಚ್) "ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ;

(ಐ) "ಜೀವರಕ್ಷಕ (Good Samaritan)" ಎಂದರೆ, ಪ್ರಾಮಾಣಿಕವಾಗಿ, ಪ್ರತಿಫಲದ ಅಪೇಕ್ಷೆಯಿಲ್ಲದೆ ಮತ್ತು ಯಾವುದೇ ಕರ್ತವ್ಯದ ಅಥವಾ ನಿಗಾ ಅಥವಾ ವಿಶೇಷ ಸಂಬಂಧ ಇರದಿದ್ದರೂ ಗಾಯಾಳುವಿಗೆ ತುರ್ತು ಚಿಕಿತ್ಸೆಯನ್ನು ನೀಡುವುದಕ್ಕೆ ಸ್ವಇಚ್ಛೆಯಿಂದ ಮುಂದೆ ಬರುವ ಒಬ್ಬ ವ್ಯಕ್ತಿ;

(ಜೆ) "ಆಸ್ಪತ್ರೆ" ಎಂದರೆ, ವೈದ್ಯಕೀಯ, ಶಸ್ತ್ರಚಿಕಿತ್ಸಕ, ಚಿಕಿತ್ಸಾವಿಧಾನ, ರೋಗನಿರ್ಣೀತ ಚಿಕಿತ್ಸೆಗಳು, ವೈದ್ಯಕೀಯ ನಿಗಾ ಸೌಲಭ್ಯಗಳು ಅಥವಾ ಸೇವೆಗಳನ್ನು ನೀಡುವ ಯಾವುದೇ ಹೆಸರಿನಿಂದ ಕರೆಯಲಾಗುವ ಸಂಸ್ಥೆ ಮತ್ತು ಇದು ಬೋಧಕ ಆಸ್ಪತ್ರೆಯನ್ನು ಒಳಗೊಂಡ ಮತ್ತು ಎಲ್ಲಾ ಅಂಥ ರೀತಿಯ ಸಂಸ್ಥೆಗಳನ್ನು ಒಳಗೊಳ್ಳುತ್ತದೆ;

(ಕೆ) "ಅಪರಾಧದ ಘಟನೆ" ಎಂಬುದು, ಯಾವೊಬ್ಬ ವ್ಯಕ್ತಿಗೆ ದೈಹಿಕ ಅಥವಾ ಶಾರೀರಿಕ ಹಾನಿಯುಂಟು ಮಾಡುವ, ಭಾರತೀಯ ದಂಡ ಸಂಹಿತೆ, 1860ರ (1860ರ ಕೇಂದ್ರ ಅಧಿನಿಯಮ 45) ಅಡಿಯಲ್ಲಿನ ಯಾವುದೇ ಅಪರಾಧವನ್ನು ಒಳಗೊಳ್ಳುತ್ತದೆ;

(ಎಲ್) "ಗಾಯಾಳು" ಎಂಬುದು, ಅಪಘಾತ ಅಥವಾ ಅಪರಾಧದ ಘಟನೆ ಅಥವಾ ಯಾವುದೇ ಇತರ ತುರ್ತು ಸನ್ನಿವೇಶಗಳಿಂದ ಘಾಸಿಗೊಳ್ಳುವ ಅಪಾಯದಲ್ಲಿರುವ ಒಬ್ಬ ವ್ಯಕ್ತಿ ಅಥವಾ ತುರ್ತು ನಿಗಾ ಅಥವಾ ಚಿಕಿತ್ಸೆಯ ಅಗತ್ಯವಿರುವ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(ಎಂ) "ವೈದ್ಯಕೀಯ ವೃತ್ತಿನಿರತ" ಎಂದರೆ, ನೈಜ ವೈದ್ಯಕೀಯ ಚಿಕಿತ್ಸೆಯನ್ನು ನೀಡುವುದರೊಂದಿಗೆ ಅವರ ವೃತ್ತಿಯ ಅಥವಾ ಶಾಸನಾತ್ಮಕ ಕರ್ತವ್ಯದ ಭಾಗವಾಗಿ ಅಥವಾ ಉದ್ಯೋಗದ ಭಾಗವಾಗಿ ತುರ್ತು ವೈದ್ಯಕೀಯ ಸಂದರ್ಭಕ್ಕೆ ಸ್ಪಂದಿಸುವ, ಲೈಸೆನ್ಸು ಹೊಂದಿದ ಅಥವಾ ಪ್ರಮಾಣ ಪತ್ರ ಹೊಂದಿರುವ ವೈದ್ಯ, ಶಸ್ತ್ರ ಚಿಕಿತ್ಸಕ, ಫಿಜಿಷಿಯನ್, ದಾದಿ, ಆಸ್ಪತ್ರೆ ಅಟೆಂಡೆಂಟ್, ಅರೆ ವೈದ್ಯಕೀಯ ಸಿಬ್ಬಂದಿ ಅಥವಾ ಯಾವೊಬ್ಬ ಇತರ ವ್ಯಕ್ತಿ;

(ಎನ್) "ವೈದ್ಯಕೀಯ ಕಾನೂನು ನಮೂನೆ" ಎಂದರೆ, ಆಸ್ಪತ್ರೆಯಲ್ಲಿ ನಡೆಸುವ ಕಾನೂನು ತೊಡಕುಗಳನ್ನು ಹೊಂದಿರುವ ಯಾವುದೇ ನಡವಳಿಗಳಿಗೆ ಸಂಬಂಧಿಸಿದಂತೆ ಆಸ್ಪತ್ರೆಯು ಸಿದ್ಧಪಡಿಸಲು ಅಗತ್ಯವಿರುವ ಯಾವುದೇ ದಾಖಲೆ;

(ಒ) "ವೈದ್ಯಕೀಯ ಕಾರ್ಯವಿಧಾನ" ಎಂದರೆ, ಯಾವೊಬ್ಬ ಗಾಯಾಳುವಿಗೆ ಅಂಥ ಗಾಯಾಳುವಿನ ಪರಿಸ್ಥಿತಿಯನ್ನು ಸ್ಥಿರಗೊಳಿಸುವುದಕ್ಕೆ ಅಗತ್ಯವಾದ ಚಿಕಿತ್ಸಾ ವಿಧಾನವನ್ನು ನಿರ್ಧರಿಸಲು ಆಸ್ಪತ್ರೆ ಅಥವಾ ವೈದ್ಯಕೀಯ ವೃತ್ತಿನಿರತರು ನಡೆಸುವ ಪ್ರಾಥಮಿಕ ಪರೀಕ್ಷೆ, ರೋಗನಿರ್ಣಯ ಅಥವಾ ತಪಾಸಣೆ;

(ಪಿ) "ವಿಶೇಷ ಸಂಬಂಧ" ಎಂದರೆ, ಈ ಮುಂದಿನ ಯಾವುದಾದರೂ ಸಂಬಂಧಗಳು, ಎಂದರೆ:–

(i) ವೈದ್ಯ ಮತ್ತು ರೋಗಿ;

(ii) ಉದ್ಯೋಗದಾತ ಮತ್ತು ಉದ್ಯೋಗಿ;

(iii) ಗಂಡ, ಹೆಂಡತಿ, ಮಕ್ಕಳು ಮತ್ತು ತಂದೆ ತಾಯಿಯರನ್ನು ಒಳಗೊಂಡ ನಿಕಟ ಕುಟುಂಬ; ಮತ್ತು

(iv) ಆಯಾ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾನೂನಿನ ಅಡಿಯಲ್ಲಿ ಪೋಷಕ ಅಥವಾ ಕಾನೂನು ಬದ್ಧ ಪ್ರಭಾವವಿರುವ ಯಾವುದೇ ಇತರ ವ್ಯಕ್ತಿ;

(ಕ್ಯೂ) "ಸ್ಥಿರಗೊಳಿಸುವುದು (stabilize)" ಎಂದರೆ, ಒಂದು ಆಸ್ಪತ್ರೆಯಿಂದ, ಅಗತ್ಯವಿರುವ ಚಿಕಿತ್ಸೆಯನ್ನು ನೀಡುವುದಕ್ಕಾಗಿ ಲಭ್ಯವಿರುವ ಅಂಥ ಯುಕ್ತ ಸೌಲಭ್ಯಗಳಿರುವ ಮತ್ತೊಂದು ಆಸ್ಪತ್ರೆಗೆ, ಅಂಥ ಗಾಯಾಳುವನ್ನು ವರ್ಗಾಯಿಸುವ ಸಂದರ್ಭದಲ್ಲಿ ಆಗಬಹುದಾದ ಅಥವಾ ಸಂಭವಿಸಬಹುದಾದ, ಅಂಥ ಗಾಯಾಳುವಿನ ಪರಿಸ್ಥಿತಿಯನ್ನು ವಾಸ್ತವಿಕವಾಗಿ

ಕುಗ್ಗದಿರುವಂತೆ (deterioration), ಸಿಗಬಹುದಾದ ವೈದ್ಯಕೀಯ ಸಂಭಾವ್ಯತೆಯೊಳಗೆ, ಗಾಯಾಳುವಿಗೆ ಅವಶ್ಯವಾದ ಯಾವುದೇ ತುರ್ತು ನಿಗಾವನ್ನು ನೀಡುವುದು.

(ಆರ್) "ವರ್ಗಾಯಿಸುವುದು" ಎಂದರೆ, ಆಸ್ಪತ್ರೆಯೊಂದಿಗೆ ನೇರವಾಗಿ ಅಥವಾ ಪರೋಕ್ಷವಾಗಿ ಉದ್ಯೋಗದಲ್ಲಿರುವ ಅಥವಾ ಸಹವರ್ತಿಯಾಗಿರುವ ಯಾವೊಬ್ಬ ವ್ಯಕ್ತಿಯ ನಿರ್ದೇಶನ ಅಥವಾ ಸಹಾಯದಿಂದ ಗಾಯಾಳುವನ್ನು ಆಸ್ಪತ್ರೆಯ ಹೊರಗೆ ಬಿಡುಗಡೆಗೊಳಿಸುವ ಸಂದರ್ಭವನ್ನು ಒಳಗೊಂಡಿರುತ್ತದೆ, ಆದರೆ,–

(i) ಮರಣ ಹೊಂದಿರುವನೆಂದು ಘೋಷಿಸಲಾದ; ಅಥವಾ

(ii) ಯಾವೊಬ್ಬ ಅಂಥ ವ್ಯಕ್ತಿಯ ಅನುಮತಿ ಇಲ್ಲದೇ ಆಸ್ಪತ್ರೆಯನ್ನು ತ್ಯಜಿಸುವ,

– ವ್ಯಕ್ತಿಯ ಚಲನವಲನದ ಅಂಥ ಸಂದರ್ಭವನ್ನು ಒಳಗೊಳ್ಳುವುದಿಲ್ಲ.

(ಎಸ್) "ಚಿಕಿತ್ಸೆ" ಎಂದರೆ, ಗಾಯಾಳುವಿಗೆ ವೈದ್ಯಕೀಯ ವೃತ್ತಿನಿರತನು ನೀಡುವ ಯುಕ್ತ ವೈದ್ಯಕೀಯ ಚಿಕಿತ್ಸಾ ಸೌಲಭ್ಯಗಳು ಅಥವಾ ಸೇವೆಗಳು ಮತ್ತು ಇದು ಪ್ರಥಮ ಚಿಕಿತ್ಸೆ, ತುರ್ತು ನಿಗಾ ಮತ್ತು ವೈದ್ಯಕೀಯ ಶಸ್ತ್ರಚಿಕಿತ್ಸೆ, ಚಿಕಿತ್ಸಾ ವಿಧಾನ ಮತ್ತು ರೋಗನಿರ್ಣೀತ ಚಿಕಿತ್ಸೆಗಳನ್ನು ಒಳಗೊಳ್ಳುತ್ತದೆ.

## ಅಧ್ಯಾಯ–II
## ಜೀವರಕ್ಷಕರಿಗೆ ರಕ್ಷಣೆ

**3. ಸಿವಿಲ್ ಅಥವಾ ಕ್ರಿಮಿನಲ್ ಹೊಣೆಗಾರಿಕೆಯಿಂದ ಜೀವರಕ್ಷಕರಿಗೆ ರಕ್ಷಣೆ.–** (1) ಗಾಯಾಳುವಿಗೆ ತುರ್ತು ನಿಗಾ ವಹಿಸುವಾಗ ಮಾಡಲಾದ ಕಾರ್ಯ ಅಥವಾ ನಡೆಸಲಾದ ಲೋಪಕ್ಕಾಗಿ ಜೀವರಕ್ಷಕನು, ಅಂಥ ಕಾರ್ಯ ಅಥವಾ ಲೋಪವನ್ನು ಸದ್ಭಾವನೆಯಿಂದ,–

(i) ಗಾಯಾಳು ವ್ಯಕ್ತಿಯು ವ್ಯಕ್ತಪಡಿಸುವ ಮೂಲಕ ಅಥವಾ ಸೂಚಿಸುವ ಮೂಲಕ ನೀಡುವ ಸಮ್ಮತಿಯೊಂದಿಗೆ; ಅಥವಾ

(ii) ಅಂಥ ವ್ಯಕ್ತಿಯು ಸಮ್ಮತಿಯನ್ನು ಸೂಚಿಸುವುದು ಅಸಾಧ್ಯವೆನ್ನುವಂಥ ಸಂದರ್ಭಗಳಲ್ಲಿ, ಗಾಯಾಳುವಿನ ಸಮ್ಮತಿಯ ಹೊರತಾಗಿಯೂ; ಅಥವಾ

(iii) ಗಾಯಾಳುವು ಸಮ್ಮತಿಯನ್ನು ನೀಡಲು ಅಸಮರ್ಥನಾಗಿದ್ದಲ್ಲಿ ಆತನ ಪೋಷಕ ಅಥವಾ ಆತನ ಕಾನೂನುಬದ್ಧ ಪ್ರಭಾರದಲ್ಲಿರುವ ಇತರ ವ್ಯಕ್ತಿಯ ಸಮ್ಮತಿಯೊಂದಿಗೆ ಅಥವಾ ತುರ್ತು ನಿಗಾವಹಿಸುವ ಸಂದರ್ಭದಲ್ಲಿ ಆತನು ಪೋಷಕರನ್ನು ಅಥವಾ ಆತನ ಕಾನೂನುಬದ್ಧ ಪ್ರಭಾರದಲ್ಲಿರುವ ಇತರ ವ್ಯಕ್ತಿಯನ್ನು ಹೊಂದಿರದಿದ್ದಲ್ಲಿ, ಯಾರಿಂದ ಸಮ್ಮತಿಯನ್ನು ಪಡೆಯಲು ಸಾಧ್ಯವಾಗುವುದೋ ಅವರಿಂದ ಅಂಥ ಸಮ್ಮತಿಯ ಹೊರತಾಗಿ;

–ಮಾಡಿರುವಾಗ ಆತನನ್ನು ಯಾವುದೇ ಸಿವಿಲ್ ಅಥವಾ ಕ್ರಿಮಿನಲ್ ಹೊಣೆಗಾರಿಕೆಗಳಿಗೆ ಗುರಿಪಡಿಸತಕ್ಕದ್ದಲ್ಲ:

ಪರಂತು, ಜೀವರಕ್ಷಕನು ತುರ್ತು ನಿಗಾ ವಹಿಸುವಾಗ ಮಾಡಿದ ಕಾರ್ಯ ಅಥವಾ ನಡೆಸಿದ ಲೋಪದ ಸಂಬಂಧದಲ್ಲಿ ಅತಿನಿರ್ಲಕ್ಷ್ಯ ಅಥವಾ ಎಚ್ಚರ ರಹಿತನಾಗಿದ್ದಲ್ಲಿ, ಸಿವಿಲ್ ಹೊಣೆಗಾರಿಕೆಯಿಂದ ರಕ್ಷಣೆಯು ಅನ್ವಯವಾಗತಕ್ಕದ್ದಲ್ಲ;

ಮತ್ತು ಪರಂತು, ಕ್ರಿಮಿನಲ್ ಬಾಧ್ಯತೆಯಿಂದ ರಕ್ಷಣೆಯನ್ನು,–

(ಎ) ಉದ್ದೇಶಪೂರ್ವಕವಾಗಿ ಮರಣ ಸಂಭವಿಸುವುದಕ್ಕೆ ಕಾರಣವಾದಾಗ ಅಥವಾ ಮರಣ ಸಂಭವಿಸಲು ಪ್ರಯತ್ನಿಸಿದಾಗ;

(ಬಿ) ವ್ಯಕ್ತಿಯು ತಾನು ಮಾಡುತ್ತಿರುವ ಕಾರ್ಯದಿಂದ ಮರಣವು ಸಂಭವಿಸಬಹುದೆಂದು ತಿಳಿದಿದ್ದರೂ ಹಾಗೆ ಮಾಡಿದಾಗ; ಮರಣ ಅಥವಾ ತೀವ್ರಗಾಯಗೊಳ್ಳುವುದನ್ನು ರಕ್ಷಿಸುವ ಹೊರತಾಗಿ ಯಾವುದೇ ಇತರ ಉದ್ದೇಶದಿಂದ ಮಾಡಿದಾಗ;

(ಸಿ) ಮರಣ ಅಥವಾ ಘಾಸಿಗೊಳ್ಳುವುದರಿಂದ ರಕ್ಷಿಸುವ ಹೊರತಾಗಿ ಯಾವುದೇ ಇತರ ಉದ್ದೇಶವಿರುವಾಗ ಸ್ವಯಂಕೃತವಾಗಿ ಘಾಸಿಗೊಳಿಸಿದಾಗ ಅಥವಾ ಘಾಸಿ ಮಾಡಲು ಪ್ರಯತ್ನಿಸಿದಾಗ; ಮತ್ತು

(ಡಿ) ಯಾವುದೇ ಅಪರಾಧವನ್ನು ಎಸಗುವುದಕ್ಕೆ, ಯಾವುದೇ ಅಪರಾಧದ ದುಷ್ಪ್ರೇರಣೆ ಮಾಡಿದಾಗ,

– ವಿಸ್ತರಿಸತಕ್ಕದ್ದಲ್ಲ.

(2) ಒಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಗುಂಪು ಗಾಯಾಳುವನ್ನು ಆಸ್ಪತ್ರೆಗೆ ತಂದಿರುವಾಗ ಮತ್ತು ಸದರಿ ಆಸ್ಪತ್ರೆಯವರು 4ನೇ ಪ್ರಕರಣದ (3)ನೇ ಉಪಪ್ರಕರಣದ ಅಡಿಯಲ್ಲಿ ಪ್ರತಿಯೊಬ್ಬರಿಗೂ ಸ್ವೀಕೃತಿಯನ್ನು ನೀಡಿದಲ್ಲಿ, ನ್ಯಾಯಾಲಯವು ಅಂಥ ಎಲ್ಲಾ ವ್ಯಕ್ತಿಗಳನ್ನು ಜೀವರಕ್ಷಕರೆಂದು ಭಾವಿಸತಕ್ಕದ್ದು.

**4. ಜೀವರಕ್ಷಕನ ಹಕ್ಕುಗಳು.–** (1) ಒಬ್ಬ ಜೀವರಕ್ಷಕನು,–

(ಎ) ವೈದ್ಯಕೀಯ ಕಾನೂನು ನಮೂನೆಯನ್ನು ತಯಾರಿಸುವುದನ್ನೂ ಒಳಗೊಂಡಂತೆ ಆಸ್ಪತ್ರೆಯಲ್ಲಿ ತನ್ನ ಹೆಸರು, ದೂರವಾಣಿ ಸಂಖ್ಯೆ ಮತ್ತು ವಿಳಾಸದಂಥ ಯಾವುದೇ ವೈಯಕ್ತಿಕ ಮಾಹಿತಿಯನ್ನು ಒದಗಿಸುವ; ಅಥವಾ

(ಬಿ) ಗಾಯಾಳುವನ್ನು ಆಸ್ಪತ್ರೆಯಲ್ಲಿ ದಾಖಲಿಸುವುದಕ್ಕೆ ಸಂಬಂಧಿಸಿದ ಯಾವುದೇ ಕಾರ್ಯವಿಧಾನವನ್ನು ಪೂರೈಸುವ; ಅಥವಾ

(ಸಿ) ಆಸ್ಪತ್ರೆಯಲ್ಲಿ ಗಾಯಾಳುವಿನ ಚಿಕಿತ್ಸೆಗಾಗಿ ಯಾವುದೇ ವೈದ್ಯಕೀಯ ವೆಚ್ಚಗಳನ್ನು ಭರಿಸುವ;

–ಅಗತ್ಯವಿರತಕ್ಕದ್ದಲ್ಲ.

(2) ಜೀವರಕ್ಷಕನು ಅಪಘಾತದ ಅಥವಾ ಅಪರಾಧ ಘಟನೆಯ ಅಥವಾ ಯಾವುದೇ ಇತರ ತುರ್ತು ಸನ್ನಿವೇಶದ ಪ್ರತ್ಯಕ್ಷದರ್ಶಿಯಾಗಿ ಸಾಬೀತಾಗದ ಹೊರತು, ಈ ಅಧಿನಿಯಮದ 9 ಮತ್ತು 10ನೇ ಪ್ರಕರಣದ ಅನುಸಾರವಾಗಿ ಜೀವರಕ್ಷಕನು ಪೋಲೀಸರಿಂದ ತನಿಖೆಗೊಳಪಡುವ ಅಗತ್ಯವಿರತಕ್ಕದ್ದಲ್ಲ:

ಪರಂತು, ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಯುಕ್ತ ಪ್ರಾಧಿಕಾರಕ್ಕೆ ಕಿರುಕುಳ ಅಥವಾ ಬೆದರಿಕೆಯ ಆಧಾರದ ಮೇಲೆ ಯಾವುದೇ ತೊಂದರೆಗಾಗಿ ಪೊಲೀಸ್ ಅಧಿಕಾರಿಯ ವಿರುದ್ಧ ದೂರನ್ನು ಜೀವರಕ್ಷಕನು ದಾಖಲಿಸಬಹುದು ಮತ್ತು ಅಂಥ ಪ್ರಾಧಿಕಾರವು ಆ ದೂರಿನ ಆಧಾರದ ಮೇರೆಗೆ ಇಲಾಖಾ ವಿಚಾರಣೆಯನ್ನು ಆರಂಭಿಸುವುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(3) (ಎ) ಜೀವರಕ್ಷಕನು ಆಸ್ಪತ್ರೆಗೆ ಆತನ ಸ್ವಂತ ಹೆಸರು ಮತ್ತು ವಿಳಾಸ ಗೊತ್ತಿದ್ದಲ್ಲಿ ಗಾಯಾಳುವಿನ ಹೆಸರನ್ನು ಸ್ವಇಚ್ಛೆಯಿಂದ ಒದಗಿಸಬಹುದು ಹಾಗೂ ಅಂಥ ಗಾಯಾಳುವನ್ನು ಆತನು ಕಾಪಾಡಿರುವ ಸಮಯ ಮತ್ತು ಸ್ಥಳದ ಮಾಹಿತಿಯನ್ನು ಒದಗಿಸುವುದು ಅವಶ್ಯವಾಗಿರತಕ್ಕದ್ದು.

(ಬಿ) ಜೀವರಕ್ಷಕನು (ಎ) ಖಂಡದಲ್ಲಿರುವ ಮಾಹಿತಿಯನ್ನು ಒದಗಿಸಿದಲ್ಲಿ, ಅದರ ಪ್ರತಿಯೊಂದಿಗೆ ಆತನ ಸೇವೆಗಳ ಸ್ವೀಕೃತಿಯನ್ನು ಆತನ ದಾಖಲೆಗಳಿಗಾಗಿ ತಕ್ಷಣವೇ ಆತನಿಗೆ ಒದಗಿಸತಕ್ಕದ್ದು.

## ಅಧ್ಯಾಯ–III
## ವೈದ್ಯಕೀಯ ವೃತ್ತಿನಿರತರಿಗೆ ರಕ್ಷಣೆ

**5. ವೈದ್ಯಕೀಯ ವೃತ್ತಿನಿರತರಿಗೆ ರಕ್ಷಣೆ.–** (1) ಸಂಹಿತೆಯ XXIII ಮತ್ತು XXIV ನೇ ಅಧ್ಯಾಯಗಳಲ್ಲಿ ವಿರುದ್ಧವಾಗಿ ಏನೇ ಒಳಗೊಂಡಿದ್ದರೂ, ನ್ಯಾಯಾಲಯವು ಸೂಕ್ತವೆಂದು ಭಾವಿಸಿದಲ್ಲಿ ಯಾವುದೇ ವೈದ್ಯಕೀಯ ವೃತ್ತಿನಿರತನು ಸಾಕ್ಷ್ಯವನ್ನು ಶಪಥಪತ್ರದ (Affidavit) ಮೂಲಕ ನೀಡಬಹುದು ಮತ್ತು ಎಲ್ಲಾ ವಿನಾಯಿತಿಗಳಿಗೆ ಒಳಪಟ್ಟು ಸಂಹಿತೆಯ ಅಡಿಯಲ್ಲಿನ ಯಾವುದೇ ವಿಚಾರಣೆ, ಪರೀಕ್ಷಣೆ ಅಥವಾ ಯಾವುದೇ ನಡವಳಿಗಳಲ್ಲಿ ಸಾಕ್ಷ್ಯವಾಗಿ ದಾಖಲುಮಾಡಬಹುದು.

(2) ನ್ಯಾಯಾಲಯವು, ಅದು ಸೂಕ್ತವೆಂದು ಭಾವಿಸಿದರೆ, ಅಭಿಯೋಜನೆ ಅಥವಾ ಆಪಾದಿತನ ಅರ್ಜಿಯ ಮೇಲೆ ಯಾವುದೇ ಅಂಥ ವೈದ್ಯಕೀಯ ವೃತ್ತಿನಿರತರನ್ನು ಶಪಥಪತ್ರದಲ್ಲಿ ಒಳಗೊಂಡ ಅಂಶಗಳಿಗಾಗಿ ಪರೀಕ್ಷಿಸತಕ್ಕದ್ದು.

(3) ಅಂಥ ವೈದ್ಯಕೀಯ ವೃತ್ತಿನಿರತರ ಪರೀಕ್ಷೆಯನ್ನು ಸಾಧ್ಯವಾದಷ್ಟು ಮಟ್ಟಿಗೆ ವಿಡಿಯೋ ಕಾನ್ಫರೆನ್ಸಿಂಗ್ ಅಥವಾ ಯಾವುದೇ ಇತರ ಯುಕ್ತ ಶ್ರವಣ–ದೃಶ್ಯ ದೂರಸಂಪರ್ಕಗಳ ಮೂಲಕ ನಡೆಸತಕ್ಕದ್ದು.

(4) ನ್ಯಾಯಾಲಯವು, ಅದು ಸೂಕ್ತವೆಂದು ಭಾವಿಸಿದರೆ, ಇತರ ವಿಶೇಷ ಕಾರಣಗಳಿಗಾಗಿ (3)ನೇ ಉಪಪ್ರಕರಣದ ಅಡಿಯಲ್ಲಿ ವೈದ್ಯಕೀಯ ವೃತ್ತಿನಿರತರನ್ನು ಪರೀಕ್ಷಿಸುವುದು ಸಾಧ್ಯವಿಲ್ಲದಿದ್ದರೆ, ಖುದ್ದಾಗಿ ಪರೀಕ್ಷಿಸಲು ಸಮನು ಮಾಡುವುದು ಮತ್ತು ಅದನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು.

## ಅಧ್ಯಾಯ–IV
## ಆಸ್ಪತ್ರೆಗಳ ಕರ್ತವ್ಯ ಮತ್ತು ಪ್ರಕ್ರಿಯಾ ಅಗತ್ಯತೆಗಳು

**6. ನೆರವು ನೀಡುವುದಕ್ಕಾಗಿ ಆಸ್ಪತ್ರೆಗಳ ಸಕಾರಾತ್ಮಕ ಕರ್ತವ್ಯ.–** (1) ಪ್ರತಿಯೊಂದು ಆಸ್ಪತ್ರೆಯು ಉಚಿತವಾಗಿ ತಕ್ಷಣದ ವೈದ್ಯಕೀಯ ಪರಿಶೋಧನೆಯ ಸೇವೆಗಳನ್ನು ಮತ್ತು ಪ್ರಥಮ ಚಿಕಿತ್ಸೆಯನ್ನು ಒದಗಿಸತಕ್ಕದ್ದು ಹಾಗೂ ಅಂಥ ಯಾವೊಬ್ಬ ಗಾಯಾಳುವಿನ ಆರೋಗ್ಯ ಸ್ಥಿತಿಗಳನ್ನು ಉತ್ತಮಪಡಿಸಲು ಮತ್ತು ಚೇತರಿಕೆಯನ್ನುಂಟು ಮಾಡುವ ಉದ್ದೇಶಕ್ಕಾಗಿ ತಾನು ಅವಶ್ಯವೆಂದು ಪರಿಗಣಿಸುವ ಯುಕ್ತ ಚಿಕಿತ್ಸೆಯನ್ನು ಒದಗಿಸತಕ್ಕದ್ದು:

ಪರಂತು, ಅವಶ್ಯವಾದ ಸೌಲಭ್ಯಗಳು ಅಥವಾ ಅರ್ಹ ಸಿಬ್ಬಂದಿ ಇಲ್ಲದ ಆಸ್ಪತ್ರೆಯು, ಅಂಥ ಯುಕ್ತ ಚಿಕಿತ್ಸೆಯನ್ನು ನೀಡಲು ಅಸಮರ್ಥವಾದಲ್ಲಿ, ಅಂಥ ಆಸ್ಪತ್ರೆಯು ಅಂಥ ಯುಕ್ತ ವ್ಯವಸ್ಥೆಗಳು ಅಥವಾ ಸಿಬ್ಬಂದಿ ಮತ್ತು ಸ್ಥಳಾವಕಾಶ ಲಭ್ಯವಿರುವ ಹತ್ತಿರದ ಆಸ್ಪತ್ರೆಗೆ ಆತನನ್ನು ವರ್ಗಾಯಿಸುವ ಮೊದಲು, ಆತನನ್ನು ಸ್ಥಿರವಾದ ಸ್ಥಿತಿಯಲ್ಲಿಡುವ ಸಲುವಾಗಿ, ವರ್ಗಾಯಿಸುವ

ಸಂದರ್ಭದಲ್ಲಿ ಎಲ್ಲಾ ವೈದ್ಯಕೀಯ ದಾಖಲೆಗಳು ಅಥವಾ ಅದರ ಪ್ರತಿಗಳು ಗಾಯಾಳುವಿನ ಆರೋಗ್ಯ ಪರಿಸ್ಥಿತಿ, ರೋಗ ಚಿಹ್ನೆಗಳ ಮತ್ತು ಲಕ್ಷಣಗಳ ಪರಿವೀಕ್ಷಣೆ, ಪ್ರಾಥಮಿಕ ರೋಗ ನಿರ್ಣಯ, ಒದಗಿಸಿದ ಚಿಕಿತ್ಸೆ ಮತ್ತು ಯಾವುದಾದರೂ ಪರೀಕ್ಷೆಗಳನ್ನು ಮಾಡಿದ್ದರೆ ಅದರ ಫಲಿತಾಂಶಗಳನ್ನು ಒಳಗೊಂಡ ಸಂಬಂಧಪಟ್ಟ ದಾಖಲೆಗಳೊಂದಿಗೆ ಗಾಯಾಳುವಿನ ಆರೋಗ್ಯಕ್ಕೆ ಆಗುವ ಅಪಾಯಸಂಭವವನ್ನು ಕನಿಷ್ಠಗೊಳಿಸುವುದಕ್ಕೆ ತನ್ನ ಸಾಮರ್ಥ್ಯದೊಳಗೆ ಲಭ್ಯವಿರುವ ಅಂಥ ಚಿಕಿತ್ಸೆ ಅಥವಾ ಕ್ರಮವನ್ನು ಒದಗಿಸತಕ್ಕದ್ದು.

(2) (1)ನೇ ಉಪಪ್ರಕರಣಕ್ಕೆ ಬಾಧಕವಾಗದಂತೆ, ವೈದ್ಯಕೀಯ ಖರ್ಚುಗಳು ಅಥವಾ ವೆಚ್ಚಗಳನ್ನು ಒದಗಿಸುವುದರಲ್ಲಿನ ಯಾವುದೇ ವಿಳಂಬಕ್ಕಾಗಿ, ಯಾವುದೇ ಆಸ್ಪತ್ರೆಯು ಗಾಯಾಳುವಿನ ಪ್ರಥಮ ಚಿಕಿತ್ಸೆ ಅಥವಾ ಚಿಕಿತ್ಸೆಯನ್ನು ನಿರಾಕರಿಸತಕ್ಕದ್ದಲ್ಲ ಅಥವಾ ವಿಳಂಬ ಮಾಡತಕ್ಕದ್ದಲ್ಲ.

**7. ಜೀವರಕ್ಷಕನನ್ನು ಆಸ್ಪತ್ರೆಯಲ್ಲಿ ತಡೆಹಿಡಿಯುವುದು.–** ಈ ಅಧಿನಿಯಮದ 4ನೇ ಪ್ರಕರಣದ (1)ನೇ ಉಪಪ್ರಕರಣದ ಅಡಿಯಲ್ಲಿ ಮಂಜೂರು ಮಾಡಿರುವ ಹಕ್ಕುಗಳಿಗೆ ಅನುಸಾರವಾಗಿ ಜೀವರಕ್ಷಕನು ಗಾಯಾಳುವನ್ನು ತಂದಿರುವಾಗ ಆಸ್ಪತ್ರೆಯೊಳಗೆ ಜೀವರಕ್ಷಕನನ್ನು ಯಾವುದೇ ಉದ್ದೇಶಕ್ಕಾಗಿ ಯಾವ ವ್ಯಕ್ತಿಯೂ ತಡೆಹಿಡಿಯತಕ್ಕದ್ದಲ್ಲ.

**8. ಆಸ್ಪತ್ರೆಯ ಕರ್ತವ್ಯಗಳು.–** (1) ಎಲ್ಲಾ ಆಸ್ಪತ್ರೆಗಳೂ ಈ ಅಧಿನಿಯಮದ 4ನೇ ಪ್ರಕರಣದ ಅನುಸಾರವಾಗಿ ಜೀವರಕ್ಷಕನ ಹಕ್ಕುಗಳನ್ನು ಕನ್ನಡ, ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಎದ್ದುಕಾಣುವ ಸ್ಥಳದಲ್ಲಿ ಪ್ರದರ್ಶಿಸುವುದು ಅವಶ್ಯವಾಗಿರತಕ್ಕದ್ದು.

(2) ಜೀವರಕ್ಷಕನು ಗಾಯಾಳುವನ್ನು ಅಂಥ ಆಸ್ಪತ್ರೆಗೆ ತಂದಿರುವಾಗ ಪ್ರತಿಯೊಂದು ಆಸ್ಪತ್ರೆಯೂ ತಕ್ಷಣ ಪೊಲೀಸರಿಗೆ ಮಾಹಿತಿಯನ್ನು ನೀಡತಕ್ಕದ್ದು:

ಪರಂತು, ಈ ಅಧಿನಿಯಮದ 4ನೇ ಪ್ರಕರಣದ ಅನುಸಾರವಾಗಿ ಮಾತ್ರ ಜೀವರಕ್ಷಕನ ವಿವರಗಳನ್ನು ಪೊಲೀಸರಿಗೆ ನೀಡಬಹುದು.

## ಅಧ್ಯಾಯ–V
## ಜೀವರಕ್ಷಕರ ಪೊಲೀಸು ತನಿಖೆ

**9. ಪೊಲೀಸರು ಹಾಜರಿಯನ್ನು ಅಗತ್ಯಪಡಿಸುವುದು ಮತ್ತು ಪರೀಕ್ಷಿಸುವುದು.–** ಭಾರತೀಯ ದಂಡ ಸಂಹಿತೆ, 1860ರ 160 ಮತ್ತು 161ನೇ ಪ್ರಕರಣದಲ್ಲಿ ವಿರುದ್ಧವಾಗಿ ಏನೇ ಒಳಗೊಂಡಿದ್ದರೂ ಮತ್ತು ಅದಕ್ಕೆ ಹೆಚ್ಚುವರಿಯಾಗಿ,–

(i) ಪ್ರತ್ಯಕ್ಷ ಸಾಕ್ಷಿಯಾಗಿರುವ ಜೀವರಕ್ಷಕನ ವಿಚಾರಣೆಯನ್ನು, ಸಂಹಿತೆಯ XII ನೇ ಅಧ್ಯಾಯದ ಅಡಿಯಲ್ಲಿ ತನಿಖೆಯನ್ನು ನಡೆಸುವ ಪೊಲೀಸ್ ಅಧಿಕಾರಿಯು, ಜೀವರಕ್ಷಕನು ಪೊಲೀಸ್ ಠಾಣೆಗೆ ಭೇಟಿ ನೀಡಲು ಆರಿಸಿಕೊಂಡಿರುವುದನ್ನು ಹೊರತುಪಡಿಸಿ, ಜೀವರಕ್ಷಕನಿಗೆ ಅನುಕೂಲಕವಾಗಿರುವಂಥ ಸಮಯ ಮತ್ತು ಆತನ ಸ್ಥಳಗಳಾದ, ಆತನ ಮನೆ ಅಥವಾ ವ್ಯವಹಾರದ ಸ್ಥಳಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ನಡೆಸತಕ್ಕದ್ದು ಹಾಗೂ ಪರೀಕ್ಷೆಯನ್ನು ನಡೆಸುವ ಅಂಥ ಪೊಲೀಸ್ ಅಧಿಕಾರಿಯು ಸರಳ ಉಡುಪುಗಳನ್ನು ಧರಿಸಿರತಕ್ಕದ್ದು;

(ii) ತನಿಖೆ ನಡೆಸುವ ಅಧಿಕಾರಿಯು ಅಂಥ ಜೀವರಕ್ಷಕನು ಪೊಲೀಸ್ ಠಾಣೆಗೆ ಭೇಟಿ ನೀಡುವುದನ್ನು ಅಗತ್ಯಪಡಿಸಿದರೆ, ಅಂಥ ಅಧಿಕಾರಿಯು ಅದಕ್ಕಾಗಿ ಕಾರಣಗಳನ್ನು ಲಿಖಿತದಲ್ಲಿ ದಾಖಲಿಸತಕ್ಕದ್ದು ಮತ್ತು ಅಂಥ ಅಧಿಕಾರಿಯಿಂದ ಈ ಉಪಪ್ರಕರಣದಲ್ಲಿ ಉಂಟಾದ ಯಾವುದೇ ಉಲ್ಲಂಘನೆಯು ಈ ಅಧಿನಿಯಮದ 4ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿನ ಪರಂತುಕಕ್ಕೆ ಅನುಸಾರವಾಗಿ ನಿಯಮಿಸಲಾದ ತೊಂದರೆ ನಿವಾರಣಾ ಪ್ರಕ್ರಿಯೆಗೆ ಆಸ್ಪದವಾಗತಕ್ಕದ್ದು; ಮತ್ತು

(iii) ತನಿಖೆ ನಡೆಸುವ ಪೊಲೀಸ್ ಅಧಿಕಾರಿಯು ಅಂಥ ಜೀವರಕ್ಷಕನ ಪೂರ್ಣ ಹೇಳಿಕೆ ಅಥವಾ ಶಪಥಪತ್ರವನ್ನು ಸಾಧ್ಯವಾದಷ್ಟು ಮಟ್ಟಿಗೆ ಒಂದೇ ಪರೀಕ್ಷೆಯಲ್ಲಿ ದಾಖಲಿಸತಕ್ಕದ್ದು.

**10. ಪಾಲಿಸದಿರುವುದು.–** ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬ ಪೊಲೀಸ್ ಅಧಿಕಾರಿಯು ಅಪರಾಧದ ತಪ್ಪಿತಸ್ಥನಾಗುವನು ಮತ್ತು ನಿಯಮಿಸಬಹುದಾದ ಅಂಥ ಶಿಸ್ತು ನಿಯಮಗಳಿಗೆ ಅನುಸಾರವಾಗಿ ದಂಡಗಳಿಗೆ ಒಳಪಡತಕ್ಕದ್ದು.

## ಅಧ್ಯಾಯ–VI
## ಜೀವರಕ್ಷಕ ನಿಧಿಯ ಸ್ಥಾಪನೆ

**11. ಜೀವರಕ್ಷಕ ನಿಧಿಯ ರಚನೆ.–** (1) ಸರ್ಕಾರವು ರಾಜ್ಯ ವಿಧಾನಮಂಡಲದ ಮೂಲಕ ಈ ಸಂಬಂಧದಲ್ಲಿ ಯುಕ್ತವಾಗಿ ಮೀಸಲಿಟ್ಟ ತರುವಾಯ, ಸರ್ಕಾರವು ಅವಶ್ಯವೆಂದು ಪರಿಗಣಿಸಿದ ಅನುದಾನಗಳು ಮತ್ತು ಅಂಥ ಹಣದ ಮೊಬಲಗುಗಳ ಸಾಲಗಳನ್ನು ಯುಕ್ತ ಪ್ರಾಧಿಕಾರಕ್ಕೆ ನೀಡಬಹುದು.

(2) ಜೀವರಕ್ಷಕ ನಿಧಿ ಎಂದು ಕರೆಯಲಾಗುವ ಒಂದು ನಿಧಿಯನ್ನು ರಚಿಸತಕ್ಕದ್ದು ಮತ್ತು ಅದಕ್ಕೆ ಈ ಮುಂದಿನವುಗಳನ್ನು ಜಮೆ ಮಾಡತಕ್ಕದ್ದು, ಎಂದರೆ:–

(ಎ) ಸರ್ಕಾರವು ಯುಕ್ತ ಪ್ರಾಧಿಕಾರಕ್ಕೆ ನೀಡಲಾದ ಯಾವುದೇ ಅನುದಾನ ಅಥವಾ ಸಾಲಗಳು;

(ಬಿ) ಸರ್ಕಾರವು ನಿಯಮಿಸಬಹುದಾದ ಅಂಥ ಇತರ ಮೂಲಗಳಿಂದ ಯುಕ್ತ ಪ್ರಾಧಿಕಾರವು ಸ್ವೀಕರಿಸಿದ ಎಲ್ಲಾ ಮೊಬಲಗುಗಳು.

(3) ಅಂಥ ನಿಧಿಯನ್ನು ಈ ಅಧಿನಿಯಮದ ಉದ್ದೇಶಗಳನ್ನು ಈಡೇರಿಸುವುದಕ್ಕೆ ಈ ಸಂಬಂಧದಲ್ಲಿ ಸರ್ಕಾರವು ನಿಯಮಿಸಬಹುದಾದ ಅಂಥ ನಿಯಮಗಳಿಗೆ ಅನುಸಾರವಾಗಿ ಬಳಸತಕ್ಕದ್ದು:

ಪರಂತು, ಈ ಅಧಿನಿಯಮದ 14ನೇ ಪ್ರಕರಣದ ಅನುಸಾರವಾಗಿ ಜೀವರಕ್ಷಕನ ಯುಕ್ತ ವೆಚ್ಚಗಳನ್ನು ಪೂರೈಸುವುದಕ್ಕಾಗಿ ಸರ್ಕಾರವು, ನಿಧಿಯಿಂದ ಅಂಥ ಹಣಗಳನ್ನು ಹಂಚಿಕೆ ಮಾಡಬಹುದು.

(4) ಈ ಅಧಿನಿಯಮದ 6ನೇ ಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಸರ್ಕಾರವು ಅಧಿಸೂಚನೆಯ ಮೂಲಕ, ಈ ಸಂಬಂಧದಲ್ಲಿ ರಾಜ್ಯ ವಿಧಾನಮಂಡಲವು ಯುಕ್ತವಾಗಿ ಮೀಸಲಿಟ್ಟ ತರುವಾಯ, ಆಸ್ಪತ್ರೆಗಳ ಮೂಲಕ ಒದಗಿಸಿದ ಚಿಕಿತ್ಸೆಗೆ ಭರಿಸಲಾದ ಚಾರ್ಜುಗಳು ಅಥವಾ ವೆಚ್ಚಗಳ ಮರುಪಾವತಿಗಾಗಿ ಹೆಚ್ಚುವರಿ ನಿಯಮಗಳನ್ನು ಮಾಡಬಹುದು. ನೀಡಿದ ಅಂಥ ಯುಕ್ತ ಚಿಕಿತ್ಸೆಗಾಗಿ ಭರಿಸಲಾದ ಖರ್ಚುಗಳು ಮತ್ತು ವೆಚ್ಚಗಳ ಯುಕ್ತ ಕನಿಷ್ಟ ಹಂಚಿಕೆಯನ್ನು ಹಿಂಪಡೆಯಲು ಅಂಥ ಆಸ್ಪತ್ರೆಯು ಅಸಮರ್ಥವಾದಲ್ಲಿ, ಆಗ ಅಂಥ ಆಸ್ಪತ್ರೆಯು, ಅಂಥ ನಿಯಮಗಳ ಪ್ರಾರಂಭದ ದಿನಾಂಕದ ತರುವಾಯ ಈ ಸಂಬಂಧದಲ್ಲಿ ಸರ್ಕಾರವು ನಿಯಮಿಸಬಹುದಾದ ಅಂಥ ಅವಧಿ ಮತ್ತು ಅಂಥ ನಮೂನೆ ಹಾಗೂ ವಿಧಾನದಲ್ಲಿ ಯುಕ್ತ ಪ್ರಾಧಿಕಾರಕ್ಕೆ ಅರ್ಜಿಯನ್ನು ಸಲ್ಲಿಸಬಹುದು.

**12. ನಿಧಿಯ ಅನುಷ್ಠಾನ ಮತ್ತು ಆಡಳಿತದ ಜವಾಬ್ದಾರಿ.–** ಸರ್ಕಾರವು ಅಧಿಸೂಚನೆಯ ಮೂಲಕ, ಜಿಲ್ಲಾ ಹಂತದಲ್ಲಿ, ಈ ನಿಧಿಯ ಅನುಷ್ಠಾನ ಮತ್ತು ನಿರ್ವಹಣೆಗೆ ಜವಾಬ್ದಾರಿಯಾಗತಕ್ಕ ಒಂದು ಯುಕ್ತ ಪ್ರಾಧಿಕಾರವನ್ನು ನಿಯಮಿಸತಕ್ಕದ್ದು ಮತ್ತು ಅದು ಈ ಅಧಿನಿಯಮ ಅಡಿಯಲ್ಲಿ ತೊಂದರೆ ನಿವಾರಣೆಗಾಗಿ ನೋಡಲ್ ಪ್ರಾಧಿಕಾರವಾಗಿ ಕಾರ್ಯನಿರ್ವಹಿಸತಕ್ಕದ್ದು.

## ಅಧ್ಯಾಯ–VII
## ಕಾನೂನು ನಡವಳಿಗಳನ್ನು ಸುಲಭಗೊಳಿಸುವುದು

**13. ನ್ಯಾಯಾಲಯ ನಡವಳಿಗಳನ್ನು ಮುಂದೂಡುವುದಕ್ಕೆ ಅಥವಾ ಮುಂದಕ್ಕೆ ಹಾಕುವುದಕ್ಕೆ ನಿರ್ಬಂಧ.–** (1) ಜೀವರಕ್ಷಕ ಮತ್ತು ವೈದ್ಯಕೀಯ ವೃತ್ತಿನಿರತನು ನ್ಯಾಯಾಲಯದಲ್ಲಿ ಸಾಕ್ಷಿಯಾಗಿ ಹಾಜರಾದಾಗ, ಮುಖ್ಯ ವಿಚಾರಣೆ ಮತ್ತು ಪಾಟೀ ಸವಾಲನ್ನು ಸಾಧ್ಯವಾದಷ್ಟು ಮಟ್ಟಿಗೆ ಅದೇ ದಿನ ನಡೆಸತಕ್ಕದ್ದು.

(2) ನ್ಯಾಯಾಲಯವು ಲಿಖಿತದಲ್ಲಿ ದಾಖಲಿಸಬೇಕಾದ ವಿಶೇಷ ಕಾರಣಗಳ ಸಂದರ್ಭವನ್ನು ಹೊರತುಪಡಿಸಿ, ಜೀವರಕ್ಷಕನ ಮುಖ್ಯ ವಿಚಾರಣೆ ಮತ್ತು ಪಾಟೀ ಸವಾಲನ್ನು ಮೂರು ಹಿಯರಿಂಗ್‌ಗಳಿಗಿಂತ ಹೆಚ್ಚಿಲ್ಲದಂತೆ ಪೂರ್ಣಗೊಳಿಸತಕ್ಕದ್ದು.

(3) ಜೀವರಕ್ಷಕ ಅಥವಾ ಸಂದರ್ಭಾನುಸಾರವಾಗಿ ವೈದ್ಯಕೀಯ ವೃತ್ತಿನಿರತನು ನ್ಯಾಯಾಲಯದಲ್ಲಿ ಸಾಕ್ಷಿಯಾಗಿ ಹಾಜರಾದಾಗ, ಲಿಖಿತದಲ್ಲಿ ದಾಖಲಿಸಬೇಕಾದ ವಿಶೇಷ ಕಾರಣಗಳ ಸಂದರ್ಭವನ್ನು ಹೊರತುಪಡಿಸಿ, ಮುಂದಕ್ಕೆ ಹಾಕುವುದನ್ನು ಅಥವಾ ಮುಂದೂಡುವುದನ್ನು ಮಂಜೂರು ಮಾಡತಕ್ಕದ್ದಲ್ಲ.

(4) ಅಂಥ ಮುಂದಕ್ಕೆ ಹಾಕುವುದನ್ನು ಅಥವಾ ಮುಂದೂಡುವುದನ್ನು ಮಂಜೂರು ಮಾಡುವ ಮೇಲಿನ ನಿಬಂಧನೆಗಳು, ಯುಕ್ತ ಪ್ರಕರಣಗಳಲ್ಲಿ ಪ್ರಾಸಿಕ್ಯೂಷನ್ ಅಥವಾ ಸಂದರ್ಭಾನುಸಾರವಾಗಿ ಆಪಾದಿತರಿಂದ ಹೆಚ್ಚಿನ ಖರ್ಚುಗಳ (exemplary costs) ಪಾವತಿಯನ್ನೂ ಒಳಗೊಂಡಿರತಕ್ಕದ್ದು:

ಪರಂತು, ಯಾವುದೇ ಸಂದರ್ಭದಲ್ಲಿ ಜೀವರಕ್ಷಕನು ಹಾಜರಾಗಿರುವಾಗ ಒಂದಕ್ಕಿಂತ ಹೆಚ್ಚು ಮುಂದೂಡಿಕೆಯನ್ನು ಮಂಜೂರು ಮಾಡತಕ್ಕದ್ದಲ್ಲ.

**14. ಜೀವರಕ್ಷಕನಿಗೆ ಸಕಾರಣಿಕ ವೆಚ್ಚಗಳ ಗೌರವಧನ.–** ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾನೂನಿಗೆ ವಿರುದ್ಧವಾಗಿ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಒಪ್ಪಂದ, ಐತೀರ್ಪು, ತೀರ್ಪು, ಡಿಕ್ರಿ, ನಿಯಮ, ವಿನಿಯಮ ಅಥವಾ ಇತರ ಲಿಖಿತಪತ್ರಗಳಲ್ಲಿ ಏನೇ ಒಳಗೊಂಡಿದ್ದರೂ,–

(i) ನ್ಯಾಯಾಲಯದ ಮುಂದೆ ಯಾವುದೇ ವಿಚಾರಣೆ, ಅಧಿವಿಚಾರಣೆ ಅಥವಾ ಇತರ ನಡವಳಿಗಳ ಉದ್ದೇಶಕ್ಕಾಗಿ ನ್ಯಾಯಾಲಯಕ್ಕೆ ಸಾಕ್ಷಿಯಾಗಿ ಹಾಜರಾಗುವ ಜೀವರಕ್ಷಕನು ಭರಿಸಿದ ಸಕಾರಣಿಕ ವೆಚ್ಚಗಳಿಗಾಗಿ ಸರ್ಕಾರದ ಕಡೆಯಿಂದ ಗೌರವಧನ ಸಂದಾಯ ಮಾಡುವುದಕ್ಕಾಗಿ ನ್ಯಾಯಾಲಯವು ಆದೇಶಿಸತಕ್ಕದ್ದು;

(ii) ಅಂಥ ಸಕಾರಣಿಕ ವೆಚ್ಚಗಳಲ್ಲಿ ವಾಸ್ತವಿಕ ಸಾರಿಗೆ ಖರ್ಚು ಮತ್ತು ಜೀವರಕ್ಷಕನ ದಿನಗೂಲಿಯ ನಷ್ಟ, ದಿನ ಒಂದಕ್ಕೆ ಕನಿಷ್ಟ ಒಂದು ನೂರು ರೂಪಾಯಿಗಳಿಗೆ ಒಳಪಟ್ಟು ಅಥವಾ ಸರ್ಕಾರವು ಕಾಲಕಾಲಕ್ಕೆ ನಿಯಮಿಸಬಹುದಾದ ಅಂಥ ಹೆಚ್ಚಿನ ಮೊಬಲಗು ಇವುಗಳನ್ನು ಪರಿಗಣಿಸತಕ್ಕದ್ದು;

(iii) ಸಕಾರಣಿಕ ವೆಚ್ಚಗಳ ಗೌರವಧನದ ಆದೇಶವನ್ನು ಜೀವರಕ್ಷಕನು ನ್ಯಾಯಾಲಯಕ್ಕೆ ಹಾಜರಾದ ದಿನದಂದೇ ನ್ಯಾಯಾಲಯವು ಜಾರಿಗೊಳಿಸತಕ್ಕದ್ದು ಮತ್ತು ಅದೇ ದಿನದಂದು ಆತನಿಗೆ ಸಂದಾಯ ಮಾಡತಕ್ಕದ್ದು:

ಪರಂತು, ಮುಂದಕ್ಕೆ ಹಾಕುವುದು ಅಥವಾ ಮುಂದೂಡುವುದಕ್ಕೆ ಮಂಜೂರು ಮಾಡುವುದನ್ನು ಒಳಗೊಂಡಂತೆ ಜೀವರಕ್ಷಕನು ಹಾಜರಾದ ಪ್ರತಿಯೊಂದು ದಿನವೂ ಸಕಾರಣಿಕ ವೆಚ್ಚಗಳ ಸಂದಾಯದ ಅಂಥ ಆದೇಶವನ್ನು ಮಾಡತಕ್ಕದ್ದು.

## ಅಧ್ಯಾಯ–VIII
## ಅಪರಾಧಗಳು ಮತ್ತು ದಂಡಗಳು

**15. ದಂಡವನ್ನು ವಿಧಿಸುವಾಗ ಪರಿಗಣನೆಗಳು.–** ಅಪರಾಧಕ್ಕಾಗಿ ಕ್ರಮ ಜರುಗಿಸುವಾಗ, ಆಪಾದಿತನು ಅಂಥ ಅಪರಾಧವನ್ನು ಎಸಗಿದ ತರುವಾಯ ಜೀವರಕ್ಷಕನಾಗಿ ಕಾರ್ಯವಹಿಸಿ ಮತ್ತು ಗಾಯಾಳುವಾದ ಮತ್ತೊಬ್ಬ ವ್ಯಕ್ತಿಗೆ ತುರ್ತು ನಿಗಾವಹಿಸಿದರೆ, ನ್ಯಾಯಾಲಯವು ಆಪಾದಿತನಿಗೆ ದಂಡ ವಿಧಿಸುವುದನ್ನು ನಿರ್ಧರಿಸುವಾಗ, ಆಪಾದಿತನು ನೀಡಿದ ಅಂಥ ಸಹಾಯಗಳು, ಏನಾದರೂ ಇದ್ದಲ್ಲಿ, ಅವುಗಳನ್ನು ಪರಿಗಣಿಸತಕ್ಕದ್ದು.

**16. ಪೊಲೀಸ್ ಅಧಿಕಾರಿಯಿಂದ ಅನನುಪಾಲನೆ.–** ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ಯಾವೊಬ್ಬ ಪೊಲೀಸ್ ಅಧಿಕಾರಿಯು ಅಪರಾಧದ ತಪ್ಪಿತಸ್ಥನಾಗುವನು ಮತ್ತು ಈ ಅಧಿನಿಯಮದ ಯಾವುದೇ ಉಪಬಂಧಗಳನ್ನು ಪಾಲಿಸದಿದ್ದಲ್ಲಿ ಅಥವಾ ಉಲ್ಲಂಘನೆಯ ಸಂದರ್ಭದಲ್ಲಿ ಸಂಬಂಧಿಸಿದ ಪೊಲೀಸ್ ಉಪಆಯುಕ್ತರಿಗೆ ಅಥವಾ ತತ್ಸಮಾನ ಅಧಿಕಾರಿಗೆ ದೂರನ್ನು ಸಲ್ಲಿಸತಕ್ಕದ್ದು ಹಾಗೂ ಯುಕ್ತ ನಿಯಮಗಳಿಗೆ ಅನುಸಾರವಾಗಿ ಶಿಸ್ತುಕ್ರಮಕ್ಕೊಳಪಟ್ಟು, ಅಂಥ ದೂರುಗಳನ್ನು ಸಕಾಲಿಕ ವಿಧಾನದಲ್ಲಿ ಸ್ವೀಕರಿಸಲು ಮತ್ತು ವಿಲೇ ಮಾಡಲು ಸೂಕ್ತ ವ್ಯವಸ್ಥೆಗಳನ್ನು ಮಾಡತಕ್ಕದ್ದು.

**17. ಕಂಪನಿಗಳಿಂದ ಅಪರಾಧಗಳು.–** (1) ಈ ಅಧಿನಿಯಮದ IVನೇ ಅಧ್ಯಾಯದ ಅಡಿಯಲ್ಲಿಯ ಅಪರಾಧವನ್ನು ಮಾಡುವ ವ್ಯಕ್ತಿಯು ಒಂದು ಕಂಪನಿಯಾಗಿದ್ದರೆ, ಅಪರಾಧವು ನಡೆದ ಕಾಲದಲ್ಲಿ ಆ ಕಂಪನಿಯ ವ್ಯವಹರಣೆಗಳ ನಿರ್ವಹಣೆಗಾಗಿ ಕಂಪನಿಯ ಪ್ರಭಾರದಲ್ಲಿದ್ದ ಮತ್ತು ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಮತ್ತು ಕಂಪನಿಯನ್ನು ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವನು ತನ್ನ ವಿರುದ್ಧದ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ, ಅಂಥ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧವನ್ನು ತಡೆಗಟ್ಟಲು ತಾನು ಯಥೋಚಿತವಾದ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ಯಾವೊಬ್ಬ ವ್ಯಕ್ತಿಯು ರುಜುವಾತುಪಡಿಸಿದರೆ, ಯಾವುದೇ ಶಿಕ್ಷೆಗೆ ಅಂಥ ವ್ಯಕ್ತಿಯನ್ನು ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ IVನೇ ಅಧ್ಯಾಯದ ಅಡಿಯಲ್ಲಿ ದಂಡಿಸಬಹುದಾದ ಒಂದು ಅಪರಾಧವನ್ನು ಕಂಪನಿಯು ಮಾಡಿರುವಲ್ಲಿ ಮತ್ತು ಆ ಅಪರಾಧವು ಕಂಪನಿಯ ಯಾವೊಬ್ಬ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ ಅಥವಾ ಪರೋಕ್ಷ ಸಮ್ಮತಿಯಿಂದ ಅಥವಾ ಅವನ ಕಡೆಯಿಂದಾದ ಯಾವುದೇ ನಿರ್ಲಕ್ಷ್ಯದ ಕಾರಣದಿಂದ ಅಪರಾಧವು ಸಂಭವಿಸಿತೆಂದು ಹೇಳಬಹುದಾದರೆ ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ಬಗ್ಗೆ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವನು ತನ್ನ ವಿರುದ್ಧದ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು.

**ವಿವರಣೆ.**– ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಕಂಪನಿ" ಎಂದರೆ, ಕಂಪನಿಗಳ ಅಧಿನಿಯಮ, 2013ರ (2013ರ ಕೇಂದ್ರ ಅಧಿನಿಯಮ 18) ಅಥವಾ ಯಾವುದೇ ಹಿಂದಿನ ಕಂಪನಿ ಕಾನೂನುಗಳ ಅಡಿಯಲ್ಲಿ ನಿಗಮಿತಗೊಂಡ ಒಂದು ಕಂಪನಿ; ಮತ್ತು

(ಬಿ) "ನಿರ್ದೇಶಕ" ಎಂದರೆ, ಕಂಪನಿಗಳ ಅಧಿನಿಯಮ, 2013ರಲ್ಲಿ (2013ರ ಕೇಂದ್ರ ಅಧಿನಿಯಮ 18) ಪರಿಭಾಷಿಸಿದಂತೆ ಕಂಪನಿಯ ಮಂಡಳಿಗೆ ನೇಮಿಸಿದ ಒಬ್ಬ ನಿರ್ದೇಶಕ.

**18. ಸಂಘಗಳು ಅಥವಾ ನ್ಯಾಸಗಳಿಂದ ಅಪರಾಧಗಳು.–** (1) ಈ ಅಧಿನಿಯಮದ IVನೇ ಅಧ್ಯಾಯದ ಅಡಿಯಲ್ಲಿಯ ಅಪರಾಧವನ್ನು ಮಾಡುವ ವ್ಯಕ್ತಿಯು ಒಂದು ಸಂಘ ಅಥವಾ ನ್ಯಾಸವಾಗಿದ್ದರೆ, ಅಪರಾಧವು ನಡೆದ ಕಾಲದಲ್ಲಿ ಆ ಸಂಘ ಅಥವಾ ನ್ಯಾಸದ ವ್ಯವಹರಣೆಗಳ ನಿರ್ವಹಣೆಗಾಗಿ ಸಂಘ ಅಥವಾ ನ್ಯಾಸದ ಪ್ರಭಾರದಲ್ಲಿದ್ದ ಮತ್ತು ಅದಕ್ಕೆ ಜವಾಬ್ದಾರನಾಗಿದ್ದ ಪ್ರತಿಯೊಬ್ಬ ವ್ಯಕ್ತಿಯನ್ನು ಮತ್ತು ಸಂಘ ಅಥವಾ ನ್ಯಾಸವನ್ನು ಆ ಅಪರಾಧದ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವನು ತನ್ನ ವಿರುದ್ಧದ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು:

ಪರಂತು, ಈ ಉಪಪ್ರಕರಣದಲ್ಲಿ ಒಳಗೊಂಡಿರುವುದು ಯಾವುದೂ ಅಂಥ ಅಪರಾಧವು ತನ್ನ ತಿಳಿವಳಿಕೆಗೆ ಬಾರದೆ ನಡೆಯಿತೆಂದು ಅಥವಾ ಅಂಥ ಅಪರಾಧವನ್ನು ತಡೆಗಟ್ಟಲು ತಾನು ಯಥೋಚಿತವಾದ ಜಾಗರೂಕತೆಯನ್ನು ವಹಿಸಿದ್ದೆನೆಂದು ಅಂಥ ಯಾವೊಬ್ಬ ವ್ಯಕ್ತಿಯು ರುಜುವಾತುಪಡಿಸಿದರೆ, ಈ ಅಧಿನಿಯಮದಲ್ಲಿ ಉಪಬಂಧಿಸಲಾಗಿರುವ ಯಾವುದೇ ಶಿಕ್ಷೆಗೆ ಅಂಥ ವ್ಯಕ್ತಿಯನ್ನು ಗುರಿಯಾಗುವಂತೆ ಮಾಡತಕ್ಕದ್ದಲ್ಲ.

(2) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಈ ಅಧಿನಿಯಮದ IVನೇ ಅಧ್ಯಾಯದ ಅಡಿಯಲ್ಲಿ ದಂಡಿಸಬಹುದಾದ ಒಂದು ಅಪರಾಧವನ್ನು ಒಂದು ಸಂಘ ಅಥವಾ ನ್ಯಾಸವು ಮಾಡಿರುವಲ್ಲಿ ಮತ್ತು ಆ ಅಪರಾಧವು ಸಂಘದ ಅಥವಾ ನ್ಯಾಸದ ಯಾವೊಬ್ಬ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ, ನ್ಯಾಸಧಾರಿ ಅಥವಾ ಇತರ ಅಧಿಕಾರಿಯ ಸಮ್ಮತಿಯಿಂದ

ಅಥವಾ ಪರೋಕ್ಷ ಸಮ್ಮತಿಯಿಂದ ಅಥವಾ ಅವನ ಕಡೆಯಿಂದಾದ ಯಾವುದೇ ನಿರ್ಲಕ್ಷ್ಯದ ಕಾರಣದಿಂದ ಅಪರಾಧವು ಸಂಭವಿಸಿತೆಂದು ಹೇಳಬಹುದಾದರೆ ಅಂಥ ನಿರ್ದೇಶಕ, ವ್ಯವಸ್ಥಾಪಕ, ಕಾರ್ಯದರ್ಶಿ, ನ್ಯಾಸದಾರಿ ಅಥವಾ ಇತರ ಅಧಿಕಾರಿಯನ್ನು ಸಹ ಆ ಅಪರಾಧದ ಬಗ್ಗೆ ದೋಷಿಯೆಂದು ಭಾವಿಸತಕ್ಕದ್ದು ಮತ್ತು ತದನುಸಾರವಾಗಿ ಅವನು ತನ್ನ ವಿರುದ್ಧದ ವ್ಯವಹರಣೆಗೆ ಮತ್ತು ದಂಡನೆಗೆ ಗುರಿಯಾಗತಕ್ಕದ್ದು.

**ವಿವರಣೆ.**– ಈ ಪ್ರಕರಣದ ಉದ್ದೇಶಗಳಿಗಾಗಿ,–

(ಎ) "ಸಂಘ" ಎಂದರೆ, ಸಂಘಗಳ ನೋಂದಣಿ ಅಧಿನಿಯಮ, 1860ರ (1860ರ ಕೇಂದ್ರ ಅಧಿನಿಯಮ 21) ಅಡಿಯಲ್ಲಿ ನೋಂದಣಿಯಾದ ಒಂದು ನಿಗಮಿತ ನಿಕಾಯ ಮತ್ತು "ನ್ಯಾಸ" ಎಂದರೆ, ಭಾರತೀಯ ನ್ಯಾಸ ಅಧಿನಿಯಮ, 1882ರ (1882ರ ಕೇಂದ್ರ ಅಧಿನಿಯಮ 02) ಅಥವಾ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಅಡಿಯಲ್ಲಿ ನೋಂದಣಿಯಾದ ಒಂದು ನಿಕಾಯ; ಮತ್ತು

(ಬಿ) ಸಂಘ ಅಥವಾ ನ್ಯಾಸಕ್ಕೆ ಸಂಬಂಧಿಸಿದಂತೆ "ನಿರ್ದೇಶಕ" ಎಂದರೆ, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಪದನಿಮಿತ್ತ ಸದಸ್ಯನ ಹೊರತಾದ ಅದರ ಆಡಳಿತ ಮಂಡಳಿಯ ಒಬ್ಬ ಸದಸ್ಯ.

**19. ಆಸ್ಪತ್ರೆಗಳಿಂದ ಅಪರಾಧಗಳು.**– (1) ಈ ಅಧಿನಿಯಮದ IVನೇ ಅಧ್ಯಾಯದ ಯಾವುದೇ ಉಪಬಂಧಗಳ ಉಲ್ಲಂಘನೆಯು ಈ ಅಧಿನಿಯಮದ ಅಡಿಯಲ್ಲಿ ದಂಡಿಸಬಹುದಾದ ಅಪರಾಧವಾಗಿರತಕ್ಕದ್ದು.

(2) ಈ ಅಧಿನಿಯಮದ IVನೇ ಅಧ್ಯಾಯದ ಅಡಿಯಲ್ಲಿನ ಅಪರಾಧವು ಗಾಯಾಳುವಿನ ಮರಣದಲ್ಲಿ ಅಂತ್ಯಗೊಂಡಾಗ, ಅದನ್ನು ವೈದ್ಯಕೀಯ ನಿರ್ಲಕ್ಷ್ಯದ ಪ್ರಕರಣವೆಂದು ಪರಿಗಣಿಸತಕ್ಕದ್ದು ಹಾಗೂ ಆಸ್ಪತ್ರೆಯ ವಿರುದ್ಧ ಕ್ರಿಮಿನಲ್ ನಡವಳಿಗಳನ್ನು ಆರಂಭಿಸಬಹುದು.

(3) ಆಸ್ಪತ್ರೆಯು ಮೊದಲನೇ ಅಪರಾಧಕ್ಕಾಗಿ ಹತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ, ಎರಡನೇ ಅಪರಾಧಕ್ಕಾಗಿ ಐವತ್ತು ಸಾವಿರ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಮತ್ತು ಯಾವುದೇ ಅನಂತರದ ಅಪರಾಧಕ್ಕಾಗಿ ಐದು ಲಕ್ಷ ರೂಪಾಯಿಗಳವರೆಗೆ ವಿಸ್ತರಿಸಬಹುದಾದ ಜುಲ್ಮಾನೆಯನ್ನು ಪಾವತಿಸುವುದಕ್ಕೆ ಹೊಣೆಯಾಗಿರತಕ್ಕದ್ದು:

ಪರಂತು, ಗಂಭೀರ ಮತ್ತು ಪುನರಾವರ್ತಿತ ನಿರ್ಲಕ್ಷ್ಯದ ಅಪರಾಧದ ಸಂದರ್ಭದಲ್ಲಿ, ಸಂಬಂಧಿಸಿದ ಪ್ರಾಧಿಕಾರಿಯು ತಾನು ಅಗತ್ಯವೆಂದು ಭಾವಿಸಿದಲ್ಲಿ, ಈ ಪ್ರಕರಣದ ಅಡಿಯಲ್ಲಿ ಇರುವುದು ಯಾವುದೂ, ಆಸ್ಪತ್ರೆಯ ಲೈಸೆನ್ಸನ್ನು ರದ್ದುಗೊಳಿಸುವುದನ್ನು ತಡೆಯತಕ್ಕದ್ದಲ್ಲ.

**20. ವೈದ್ಯಕೀಯ ವೃತ್ತಿನಿರತರಿಂದ ಅಪರಾಧಗಳು.**– ತುರ್ತು ಸನ್ನಿವೇಶಗಳಲ್ಲಿ, IVನೇ ಅಧ್ಯಾಯದಲ್ಲಿನ ಚಿಕಿತ್ಸಾ ಗಮನವನ್ನು ಒದಗಿಸಬೇಕಾದ ವೈದ್ಯಕೀಯ ವೃತ್ತಿನಿರತನು ಅದಕ್ಕೆ ಸ್ಪಂದಿಸದಿದ್ದಾಗ, ಅದನ್ನು ಭಾರತೀಯ ವೈದ್ಯಕೀಯ ಪರಿಷತ್ತು (ವೃತ್ತಿನಿರತರ ನಡವಳಿಕೆ, ಶಿಷ್ಟಾಚಾರ ಮತ್ತು ನೀತಿನಿಯಮಗಳು) ವಿನಿಯಮಗಳು, 2002ರ 7ನೇ ಅಧ್ಯಾಯದ ಅಡಿಯಲ್ಲಿ ಅದು "ವೃತ್ತಿನಿರತರ ದುರ್ನಡತೆ" ಆಗತಕ್ಕದ್ದು ಮತ್ತು ಅಂಥ ವೈದ್ಯಕೀಯ ವೃತ್ತಿನಿರತರ ವಿರುದ್ಧ ಸದರಿ ನಿಯಮಗಳ 8ನೇ ಅಧ್ಯಾಯದ ಅಡಿಯಲ್ಲಿ ಶಿಸ್ತುಕ್ರಮವನ್ನು ಕೈಗೊಳ್ಳತಕ್ಕದ್ದು.

**21. ಅಪರಾಧದ ಸಂಜ್ಞೇಯತೆ.**– (1) ಈ ಅಧಿನಿಯಮದ ಅಡಿಯಲ್ಲಿನ ಅಪರಾಧಗಳು ಸಂಜ್ಞೇಯವಾಗಿರತಕ್ಕದ್ದಲ್ಲ ಹಾಗೂ ಜಾಮೀನೀಯವಾಗಿರತಕ್ಕದ್ದು.

(2) ನಿಯಮಿಸಿದ ಪ್ರಾಧಿಕಾರವು ದೂರನ್ನು ದಾಖಲಿಸದ ಹೊರತು ಈ ಅಧಿನಿಯಮದ ಅಡಿಯಲ್ಲಿ ಅಪರಾಧದ ಸಂಜ್ಞೇಯತೆಯನ್ನು ಯಾವುದೇ ನ್ಯಾಯಾಲಯವು ತೆಗೆದುಕೊಳ್ಳತಕ್ಕದ್ದಲ್ಲ.

**22. ಅಪೀಲು.**– ಯುಕ್ತ ಪ್ರಾಧಿಕಾರದ ಅಥವಾ ನಿಯಮಿಸಿದ ಪ್ರಾಧಿಕಾರದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು ಅಂಥ ಆದೇಶದ ಮೂವತ್ತು ದಿನಗಳ ಒಳಗಾಗಿ ನಿಯಮಿಸಬಹುದಾದಂಥ ಮೇಲ್ಮನವಿ ಪ್ರಾಧಿಕಾರಕ್ಕೆ ಅಪೀಲನ್ನು ಸಲ್ಲಿಸಬಹುದು.

## ಅಧ್ಯಾಯ–IX
## ಸಂಕೀರ್ಣ

**23. ನಿಯಮಗಳ ರಚನಾಧಿಕಾರ.**– (1) ಸರ್ಕಾರವು ಈ ಅಧಿನಿಯಮದ ಎಲ್ಲಾ ಅಥವಾ ಯಾವುದೇ ಉದ್ದೇಶಗಳನ್ನು ಈಡೇರಿಸುವುದಕ್ಕೆ ಪೂರ್ವ ಪ್ರಕಟಣೆಯ ತರುವಾಯ ಅಧಿಸೂಚನೆಯ ಮೂಲಕ ನಿಯಮಗಳನ್ನು ರಚಿಸಬಹುದು.

(2) ವಿಶೇಷವಾಗಿ ಮತ್ತು ಮೇಲಿನ ಅಧಿಕಾರದ ಸಾಮಾನ್ಯಾನ್ವಯಕ್ಕೆ ಪ್ರತಿಕೂಲವಲ್ಲದ ಅಂಥ ನಿಯಮಗಳು,–

(ಎ) ಆಸ್ಪತ್ರೆಗಳಲ್ಲಿ ಜೀವರಕ್ಷಕರ ಹಕ್ಕುಗಳಿಗಾಗಿ;

(ಬಿ) ಸಾಕ್ಷಿಯಾಗಿ ಜೀವರಕ್ಷಕರನ್ನು ಪೋಲೀಸರು ನಡೆಸಿಕೊಳ್ಳುವುದಕ್ಕಾಗಿ:

ಪರಂತು, ಈ ಅಧಿನಿಯಮದ ಉಪಬಂಧಗಳ ಅಡಿಯಲ್ಲಿ ಜೀವರಕ್ಷಕರಿಗೆ ನೀಡಿರುವ ಅಸ್ತಿತ್ವದಲ್ಲಿರುವ ಹಕ್ಕುಗಳಿಗೆ ಅಸಂಗತವಾಗಿರುವ ಸರ್ಕಾರವು ಹೊರಡಿಸಿರುವ ಯಾವುದೇ ಅಂಥ ನಿಯಮವು ಅಸಿಂಧುವೆಂದು ಪರಿಗಣಿಸತಕ್ಕದ್ದು;

(ಸಿ) ನ್ಯಾಯಾಲಯದ ನಡವಳಿಗಳನ್ನು ಸರಳಗೊಳಿಸುವುದಕ್ಕಾಗಿ;

(ಡಿ) ಸಾಕ್ಷಿಯಾಗಿರುವ ವೈದ್ಯಕೀಯ ವೃತ್ತಿನಿರತರನ್ನು ರಕ್ಷಿಸುವುದಕ್ಕಾಗಿ ಮತ್ತು ನಡೆಸಿಕೊಳ್ಳುವುದಕ್ಕಾಗಿ; ಮತ್ತು

(ಇ) ಈ ಅಧಿನಿಯಮದಲ್ಲಿ ಉಪಬಂಧಿಸಿರದ ಯಾವುದೇ ಇತರ ವಿಷಯಕ್ಕಾಗಿ (ಮೇಲ್ಮನವಿ ಪ್ರಾಧಿಕಾರವನ್ನು ನಿಯಮಿಸುವುದು, ಯಾವ ಅವಧಿಯೊಳಗೆ ಅಪೀಲುಗಳು ಅಥವಾ ಪರಿಷ್ಕರಣಾ ಅರ್ಜಿಗಳನ್ನು ಸಲ್ಲಿಸುವುದು) ಹಾಗೂ ಈ ಅಧಿನಿಯಮದ ಉದ್ದೇಶಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅವಶ್ಯವೆಂದು ಸರ್ಕಾರವು ಅಭಿಪ್ರಾಯಪಟ್ಟ ವಿಷಯಗಳಿಗಾಗಿ,

–ಉಪಬಂಧಗಳನ್ನು ಕಲ್ಪಿಸಬಹುದು.

(3) ಈ ಅಧಿನಿಯಮದ ಅಡಿಯಲ್ಲಿ ನಿಯಮವನ್ನು ಪೂರ್ವಾನ್ವಯವಾಗಿ ರಚಿಸಬಹುದು ಮತ್ತು ಅಂಥ ನಿಯಮವನ್ನು ರಚಿಸಬೇಕಾದರೆ ಇರುವ ಕಾರಣಗಳನ್ನು ರಾಜ್ಯ ವಿಧಾನಮಂಡಲದ ಉಭಯಸದನಗಳ ಮುಂದೆ ಮಂಡಿಸುವಾಗ ಹೇಳಿಕೆಯಲ್ಲಿ ನಿರ್ದಿಷ್ಟಪಡಿಸತಕ್ಕದ್ದು. (4)ನೇ ಉಪಪ್ರಕರಣದಲ್ಲಿ ಮಾಡುವ ಯಾವುದೇ ಮಾರ್ಪಾಡಿಗೆ ಒಳಪಟ್ಟು, ಈ ಅಧಿನಿಯಮದ ಅಡಿಯಲ್ಲಿ ಮಾಡಲಾದ ಪ್ರತಿಯೊಂದು ನಿಯಮಗಳು ಈ ಅಧಿನಿಯಮದಲ್ಲಿ ಅಧಿನಿಯಮಿಸಿದಂತೆ ಜಾರಿಗೊಳಿಸತಕ್ಕದ್ದು.

(4) ಈ ಅಧಿನಿಯಮದ ಅಡಿಯಲ್ಲಿ ರಚಿಸಿದ ಪ್ರತಿಯೊಂದು ನಿಯಮವನ್ನು, ಅದನ್ನು ರಚಿಸಿದ ಮೇಲೆ ಸಾಧ್ಯವಾದಷ್ಟು ಬೇಗನೆ, ರಾಜ್ಯ ವಿಧಾನಮಂಡಲದ ಪ್ರತಿಯೊಂದು ಸದನದ ಮುಂದೆ, ಅದು ಒಂದೇ ಅಧಿವೇಶನದಲ್ಲಿ ಅಥವಾ ಒಂದಾದ ಮೇಲೊಂದು ಬರುವ ಎರಡು ಅಥವಾ ಹೆಚ್ಚು ಅಧಿವೇಶನಗಳಲ್ಲಿ ಅಡಕವಾಗಬಹುದಾದ ಒಟ್ಟು ಮೂವತ್ತು ದಿನಗಳ ಅವಧಿಯವರೆಗೆ ಅಧಿವೇಶನದಲ್ಲಿರುವಾಗ ಇರಿಸತಕ್ಕದ್ದು ಮತ್ತು ಹಿಂದೆ ಹೇಳಿದ ಅಧಿವೇಶನ ಅಥವಾ ಒಂದಾದ ಮೇಲೊಂದು ಬರುವ ಅಧಿವೇಶನಗಳ ನಿಕಟೋತ್ತರ ಅಧಿವೇಶನಗಳು ಮುಗಿಯುವುದಕ್ಕೂ ಮೊದಲು ಆ ನಿಯಮದಲ್ಲಿ ಯಾವುದೇ ಮಾರ್ಪಾಟು ಮಾಡಲು ಎರಡೂ ಸದನಗಳು ಒಪ್ಪಿದರೆ ಅಥವಾ ಆ ನಿಯಮವನ್ನು ಮಾಡಕೂಡದೆಂದು ಎರಡೂ ಸದನಗಳು ಒಪ್ಪಿದರೆ, ಅಂಥ ಮಾರ್ಪಾಟು ಆದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಅಥವಾ ಸಂದರ್ಭಾನುಸಾರವಾಗಿ ಪರಿಣಾಮಕಾರಿಯಾಗತಕ್ಕದ್ದಲ್ಲ, ಆದರೆ ಅಂಥ ಮಾರ್ಪಾಟು ಅಥವಾ ರದ್ದಿಯಾತಿ ಆ ನಿಯಮದ ಅಡಿಯಲ್ಲಿ ಹಿಂದೆ ಮಾಡಿದ ಯಾವುದೇ ಕಾರ್ಯದ ಊರ್ಜಿತತೆಗೆ ಪ್ರತಿಕೂಲವಾಗಿ ಇರತಕ್ಕದ್ದಲ್ಲ.

**24. ಸ್ಕೀಮುಗಳನ್ನು ರಚಿಸಲು ಅಧಿಕಾರ.–** ಸಾಕ್ಷಿಯಾಗಿ ಹಾಜರಾಗುವ ಜೀವರಕ್ಷಕರ ಸಕಾರಣಿಕ ವೆಚ್ಚಗಳ ಮರುಪಾವತಿಗಾಗಿ ಉಪಬಂಧ ಕಲ್ಪಿಸಲು ಜೀವರಕ್ಷಕರ ಹೆಚ್ಚುವರಿ ಸಹಾಯಕ್ಕಾಗಿ ಸರ್ಕಾರವು ಅಧಿಸೂಚನೆಯ ಮೂಲಕ ಈ ಮುಂದಿನವುಗಳಿಗಾಗಿ ಸ್ಕೀಮುಗಳನ್ನು ರಚಿಸಬಹುದು:–

(ಎ) ಸಿವಿಲ್ ಅಥವಾ ಕ್ರಿಮಿನಲ್ ನಡವಳಿಗಳನ್ನು ಎದರಿಸುವ ಜೀವರಕ್ಷಕರಿಗೆ ಉಚಿತ ಕಾನೂನು ಸಲಹೆ;

(ಬಿ) ನ್ಯಾಯಾಲಯಗಳಲ್ಲಿ ವಿಡಿಯೋ ಕಾನ್ಫರೆನ್ಸಿಂಗ್ ಮೂಲಕ ಜೀವರಕ್ಷಕರ ವಿಚಾರಣೆ;

(ಸಿ) ಜೀವರಕ್ಷಕರ ಹಕ್ಕುಗಳ ಜಾಗೃತಿಯನ್ನು ಉತ್ತೇಜಿಸುವುದು;

(ಡಿ) ತುರ್ತು ಸನ್ನಿವೇಶಗಳಿಗೆ ಸ್ಪಂದಿಸುವಲ್ಲಿ ನಿರತರಾಗಿರುವ ಪೊಲೀಸರನ್ನು ಒಳಗೊಂಡಂತೆ ಇತರ ವ್ಯಕ್ತಿಗಳಿಗೆ ಪ್ರಥಮ ಚಿಕಿತ್ಸೆ ಮತ್ತು ನಾಡಿಬಡಿತ (ಹೃದಯಧಮನಿ) ಪುನರುಜ್ಜೀವಿಸುವುದಕ್ಕೆ ತರಬೇತಿ ನೀಡುವುದು; ಮತ್ತು

(ಇ) ಸರ್ಕಾರವು ಕಾಲಕಾಲಕ್ಕೆ ಯುಕ್ತವೆಂದು ಭಾವಿಸುವ ಯಾವುದೇ ಇತರ ಸ್ಕೀಮು.

**25. ವಾರ್ಷಿಕ ವರದಿ.–** (1) ಯುಕ್ತ ಪ್ರಾಧಿಕಾರವು, ನಿಯಮಿಸಬಹುದಾದಂಥ ನಮೂನೆಯಲ್ಲಿ ಮತ್ತು ಪ್ರತಿ ಆರ್ಥಿಕ ವರ್ಷದ ಅಂಥ ಕಾಲಾವಧಿಯಲ್ಲಿ ಈ ಅಧಿನಿಯಮದ ಉಪಬಂಧಗಳ ಅನುಷ್ಠಾನದ ಮೇಲಿನ ತನ್ನ ವಾರ್ಷಿಕ ವರದಿಯನ್ನು, ಈ ಅಧಿನಿಯಮದ ಎಲ್ಲಾ ಉದ್ದೇಶಗಳಿಗಾಗಿ ನೋಡಲ್ ಏಜೆನ್ಸಿಯಾಗಿರತಕ್ಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯೊಂದಿಗೆ ತಯಾರಿಸತಕ್ಕದ್ದು.

(2) ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ವಾರ್ಷಿಕ ವರದಿಗಳನ್ನು ಸಲ್ಲಿಸತಕ್ಕದ್ದು.

**26. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಯುಕ್ತ ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ಪುಸ್ತಕಗಳನ್ನು ಮತ್ತು ಇತರ ಲೆಕ್ಕಪುಸ್ತಕಗಳನ್ನು ನಿರ್ವಹಿಸುವಂತೆ ಮಾಡತಕ್ಕದ್ದು ಮತ್ತು ನಿಯಮಿಸಲಾದ ವಿಧಾನದಲ್ಲಿ ವಾರ್ಷಿಕ ಲೆಕ್ಕಪತ್ರಗಳ ತಃಖ್ತೆಯನ್ನು ಸಿದ್ಧಪಡಿಸತಕ್ಕದ್ದು.

(2) ನಿಧಿಯ ಆರ್ಥಿಕ ವರ್ಷವು ಪ್ರತಿಯೊಂದು ಕ್ಯಾಲೆಂಡರ್ ವರ್ಷದ ಏಪ್ರಿಲ್ 1ನೇ ದಿನದಿಂದ ಆರಂಭವಾಗತಕ್ಕದ್ದು ಮತ್ತು ಮುಂದಿನ ಕ್ಯಾಲೆಂಡರ್ ವರ್ಷದ ಮಾರ್ಚ್ 31 ರಂದು ಮುಕ್ತಾಯಗೊಳ್ಳತಕ್ಕದ್ದು.

(3) ನಿಧಿಯ ಲೆಕ್ಕಪತ್ರಗಳನ್ನು ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯ ಪ್ರಧಾನ ನಿರ್ದೇಶಕ ಹಾಗೂ ನಿಯಂತ್ರಕರು ವಾರ್ಷಿಕವಾಗಿ ಲೆಕ್ಕಪರಿಶೋಧನೆ ಮಾಡತಕ್ಕದ್ದು. ಯುಕ್ತ ಪ್ರಾಧಿಕಾರ ಅಥವಾ ಸರ್ಕಾರವು ಸಮವರ್ತಿ ಮತ್ತು ವಿಶೇಷ ಲೆಕ್ಕಪರಿಶೋಧನೆಗಳಿಗೂ ಸಹ ಆದೇಶಿಸಬಹುದು.

(4) ಲೆಕ್ಕಪರಿಶೋಧಕನು, ಲೆಕ್ಕಪರಿಶೋಧನೆಯ ಉದ್ದೇಶಕ್ಕಾಗಿ ಪ್ರಾಧಿಕಾರದ ಎಲ್ಲಾ ಲೆಕ್ಕಪತ್ರಗಳು ಮತ್ತು ದಾಖಲೆಗಳನ್ನು ನೋಡುವ ಅವಕಾಶ ಹೊಂದಿರತಕ್ಕದ್ದು.

(5) ಲೆಕ್ಕಪರಿಶೋಧಕನ ವಾರ್ಷಿಕ ಲೆಕ್ಕಪತ್ರಗಳ ತಃಖ್ತೆ ಮತ್ತು ವರದಿಯನ್ನು ಸ್ವೀಕರಿಸಿದ ತರುವಾಯ ಯುಕ್ತ ಪ್ರಾಧಿಕಾರವು ಕೂಡಲೇ ತನ್ನ ಸಭೆಯಲ್ಲಿ ಅದನ್ನು ಪರಿಗಣಿಸತಕ್ಕದ್ದು ಮತ್ತು ಲೆಕ್ಕಪರಿಶೋಧಕನ ವಾರ್ಷಿಕ ಲೆಕ್ಕಪತ್ರಗಳ ತಃಖ್ತೆಯ ಪ್ರತಿಯೊಂದಿಗೆ ವರದಿಯ ಪ್ರತಿಯನ್ನು ಲೆಕ್ಕಪರಿಶೋಧಕನ ಟೀಕೆಗಳು ಯಾವುದಾದರೂ ಇದ್ದಲ್ಲಿ, ಅವುಗಳ ಮೇಲೆ ಅದರ ವಿವರಣೆ ಹಾಗೂ ಲೆಕ್ಕಪರಿಶೋಧಕನು ತೋರಿಸಿಕೊಟ್ಟ ಅಕ್ರಮಗಳು ಅಥವಾ ಲೋಪದೋಷಗಳು, ಯಾವುದಾದರೂ ಇದ್ದಲ್ಲಿ, ಅವುಗಳಿಗೆ ಯುಕ್ತ ಪ್ರಾಧಿಕಾರವು ಕೈಗೊಂಡ ಕ್ರಮದ ಹೇಳಿಕೆಯೊಡನೆ ಸರ್ಕಾರಕ್ಕೆ ಕಳುಹಿಸತಕ್ಕದ್ದು.

(6) ಸರ್ಕಾರವು (5)ನೇ ಉಪಪ್ರಕರಣದಲ್ಲಿರುವ ಲೆಕ್ಕಪರಿಶೋಧಕರ ವರದಿಯನ್ನು ಮತ್ತು ಸಲ್ಲಿಸಿದ ಇತರ ದಸ್ತಾವೇಜುಗಳನ್ನು ಅವಗಾಹಿಸಿದ ತರುವಾಯ, ಅದು ತನಗೆ ಸರಿಯೆಂದು ಭಾವಿಸುವ ಅಂಥ ನಿರ್ದೇಶನಗಳನ್ನು ಯುಕ್ತ ಪ್ರಾಧಿಕಾರಕ್ಕೆ ನೀಡತಕ್ಕದ್ದು ಮತ್ತು ಅಂಥ ನಿರ್ದೇಶನಗಳನ್ನು ಯುಕ್ತ ಪ್ರಾಧಿಕಾರವು ಪಾಲಿಸತಕ್ಕದ್ದು.

**27. ವಿದ್ಯಾರ್ಥಿಗಳಿಗೆ ಪ್ರಥಮ ಚಿಕಿತ್ಸೆ ಮತ್ತು ತುರ್ತು ನಿಗಾಗಳಲ್ಲಿ ಶೈಕ್ಷಣಿಕ ಸಂಸ್ಥೆಗಳು ತರಬೇತಿ ನೀಡುವುದು.–** (1) ಹನ್ನೆರಡು ವರ್ಷಗಳ ವಯಸ್ಸಿನ ಮೇಲಿರುವ ಪ್ರತಿಯೊಬ್ಬ ವಿದ್ಯಾರ್ಥಿಗೆ, ನಿಯಮಿಸಬಹುದಾದಂಥ ಅವಧಿಗೆ ಪ್ರಥಮ ಚಿಕಿತ್ಸೆ ಮತ್ತು ತುರ್ತು ನಿಗಾಗಳಲ್ಲಿ ತರಬೇತಿ ನೀಡುವುದು ಪ್ರತಿಯೊಂದು ಶೈಕ್ಷಣಿಕ ಸಂಸ್ಥೆಗಳ ಕರ್ತವ್ಯವಾಗಿರತಕ್ಕದ್ದು.

(2) (1)ನೇ ಉಪಪ್ರಕರಣದ ಅಡಿಯಲ್ಲಿಯ ತರಬೇತಿಯನ್ನು ಪ್ರತಿ ಶೈಕ್ಷಣಿಕ ವರ್ಷದಲ್ಲಿ ಒಂದು ಬಾರಿ ನೀಡತಕ್ಕದ್ದು.

(3) (1)ನೇ ಉಪಪ್ರಕರಣದ ಅಡಿಯಲ್ಲಿ ತರಬೇತಿಯನ್ನು ನೀಡುವ ಉದ್ದೇಶಕ್ಕಾಗಿ, ಸರ್ಕಾರವು ಅಧಿಸೂಚನೆಯ ಮೂಲಕ ನಿರ್ದಿಷ್ಟಪಡಿಸಬಹುದಾದ ಅಂಥ ವೃತ್ತಿನಿರತರ ಅಥವಾ ಸಂಸ್ಥೆಗಳ ಸಹಾಯವನ್ನು ಶೈಕ್ಷಣಿಕ ಸಂಸ್ಥೆಗಳು ತೆಗೆದುಕೊಳ್ಳತಕ್ಕದ್ದು.

**28. ಜಾಗೃತಿ ಕಾರ್ಯಕ್ರಮಗಳು ಮತ್ತು ಕಾರ್ಯಗಾರಗಳನ್ನು ವ್ಯವಸ್ಥೆಗೊಳಿಸುವುದು.–** ಸರ್ಕಾರವು ಕಾಲಕಾಲಕ್ಕೆ,–

(ಎ) ನಾಗರಿಕರನ್ನು ಜೀವರಕ್ಷಕರನ್ನಾಗಿಸಲು ಸಂವೇದನಾಶೀಲರನ್ನಾಗಿ ಮಾಡುವುದಕ್ಕೆ;

(ಬಿ) ನಾಗರಿಕರನ್ನು ಆಂಬುಲೆನ್ಸ್ ಸೇವೆಗಳ ಮತ್ತು ಪೊಲೀಸ್ ಸಹಾಯವಾಣಿಯ ತುರ್ತುನಿಗಾ ಸಂಖ್ಯೆಗಳ ಕುರಿತು ಜಾಗೃತರಾಗಿಸುವುದಕ್ಕೆ; ಮತ್ತು

(ಸಿ) ನಾಗರಿಕರಿಗೆ ಪ್ರಥಮ ಚಿಕಿತ್ಸೆ ಮತ್ತು ತುರ್ತುನಿಗಾ ಕೌಶಲ್ಯದಲ್ಲಿ ತರಬೇತಿ ನೀಡುವುದಕ್ಕೆ,

–ಜಾಗೃತಿ ಕಾರ್ಯಕ್ರಮಗಳು, ಕಾರ್ಯಾಗಾರಗಳು ಮತ್ತು ವಿಚಾರಣಾ ಸಂಕಿರಣಗಳನ್ನು ವ್ಯವಸ್ಥೆಗೊಳಿಸತಕ್ಕದ್ದು ಮತ್ತು ನಡೆಸತಕ್ಕದ್ದು.

**29. ತೊಂದರೆಗಳನ್ನು ನಿವಾರಿಸಲು ಅಧಿಕಾರ.–** (1) ಈ ಅಧಿನಿಯಮದ ಉಪಬಂಧಗಳನ್ನು ಜಾರಿಗೊಳಿಸುವಲ್ಲಿ ಯಾವುದೇ ತೊಂದರೆ ಉದ್ಭವಿಸಿದಲ್ಲಿ, ಸರ್ಕಾರವು, ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿದ ಆದೇಶದ ಮೂಲಕ, ತೊಂದರೆಗಳನ್ನು ನಿವಾರಿಸಲು ತನಗೆ ಅವಶ್ಯಕ ಅಥವಾ ಯುಕ್ತವೆಂದು ಕಂಡುಬರುವ ಮತ್ತು ಈ ಅಧಿನಿಯಮದ ಉದ್ದೇಶಗಳಿಗೆ ಅಸಂಗತವಾಗಿರದಂಥ ಉಪಬಂಧಗಳನ್ನು ರಚಿಸಬಹುದು:

ಪರಂತು, ಈ ಅಧಿನಿಯಮದ ಪ್ರಾರಂಭವಾದ ದಿನಾಂಕದಿಂದ ಎರಡು ವರ್ಷಗಳ ಅವಧಿಯು ಮುಕ್ತಾಯವಾದ ತರುವಾಯ ಅಂಥ ಯಾವುದೇ ಆದೇಶವನ್ನು ಮಾಡತಕ್ಕದ್ದಲ್ಲ.

(2) ಈ ಪ್ರಕರಣದ ಅಡಿಯಲ್ಲಿ ಮಾಡಿದ ಪ್ರತಿಯೊಂದು ಆದೇಶವನ್ನು, ಅದನ್ನು ಮಾಡಿದ ತರುವಾಯ ಸಾಧ್ಯವಾದಷ್ಟು ಬೇಗನೇ ರಾಜ್ಯ ವಿಧಾನಮಂಡಲದ ಉಭಯ ಸದನಗಳ ಮುಂದೆ ಮಂಡಿಸತಕ್ಕದ್ದು.

**30. ಅಧಿನಿಯಮವು ಅಧ್ಯಾರೋಹಿ ಪರಿಣಾಮ ಹೊಂದಿರುವುದು.–** ಈ ಅಧಿನಿಯಮದ ಉಪಬಂಧಗಳು, ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಅಥವಾ ಈ ಅಧಿನಿಯಮದ ಹೊರತಾಗಿ ಯಾವುದೇ ಇತರ ಕಾನೂನು ಬಲದ ಪ್ರಭಾವ ಹೊಂದಿರುವ ಯಾವುದೇ ಲಿಖಿತ ಪತ್ರದಲ್ಲಿ ಅದಕ್ಕೆ ಅಸಂಗತವಾದುದು ಏನೇ ಒಳಗೊಂಡಿದ್ದರೂ ಪರಿಣಾಮಕಾರಿಯಾಗಿರತಕ್ಕದ್ದು.

## ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ

ಜಗತ್ತಿನಾದ್ಯಂತ ಆಕಸ್ಮಿಕ ಸಾವುಗಳು ಹೆಚ್ಚುತ್ತಲಿವೆ. ಈ ಸಮಯದಲ್ಲಿ ಒಂದು ಜೀವವನ್ನು ಆಪತ್ಕಾಲದ ಒಳಗಾಗಿ (Golden Hour) ರಕ್ಷಿಸುವ ಅನಿವಾರ್ಯತೆಯೂ ಹೆಚ್ಚಾಗಿದೆ. ಅಪಘಾತ ಸಂದರ್ಭದಲ್ಲಿ ಅದಕ್ಕೆ ಬಲಿಯಾದವರನ್ನು ಹತ್ತಿರದ ಆಸ್ಪತ್ರೆಗೆ ಸಾಗಿಸುವಾಗ ಆ ಸ್ಥಳದಲ್ಲಿರುವ ವ್ಯಕ್ತಿಗಳ ಪಾತ್ರ ನಿರ್ಣಾಯಕವಾಗಿರುತ್ತದೆ. ಪೊಲೀಸರಿಂದ ಅಥವಾ ಕಾನೂನು ವ್ಯವಹರಣೆಗಳಿಂದ ಉಂಟಾಗಬಹುದಾದ ಕಿರುಕುಳದಿಂದಾಗಿ ನೋಡುಗರು ಅಪಘಾತಕ್ಕೆ ಬಲಿಯಾದವರ ಸಹಾಯಕ್ಕೆ ಸ್ವಇಚ್ಛೆಯಿಂದ ಬರಲಾರರು ಹಾಗೂ ರಸ್ತೆ ಅಪಘಾತಕ್ಕೆ ಬಲಿಯಾದವರಿಗೆ ತ್ವರಿತ ಸಹಾಯವನ್ನು ನೀಡಲು ದಾರಿಹೋಕ ಪ್ರೇಕ್ಷಕರು ಹಿಂದುಮುಂದು ನೋಡುತ್ತಾರೆ. ಆದ್ದರಿಂದ ರಸ್ತೆ ಅಪಘಾತದಲ್ಲಿ ಬಲಿಯಾದವರ ಸಹಾಯಕ್ಕೆ ಬರುವ ಸಾರ್ವಜನಿಕರಲ್ಲಿ ಆತ್ಮವಿಶ್ವಾಸವನ್ನು ವೃದ್ಧಿಸುವ ಅಗತ್ಯವಿದೆ. ಆದ್ದರಿಂದ ಸಮರ್ಥ ಕಾನೂನು ಪರಿಸರವನ್ನು ಮತ್ತು ಸಾಕಷ್ಟು ಸಂಪನ್ಮೂಲಗಳನ್ನು ಸ್ಥಾಪಿಸುವ ಮೂಲಕ ಜೀವರಕ್ಷಕರು ಮತ್ತು ವೈದ್ಯಕೀಯ ವೃತ್ತಿ ನಿರತರನ್ನು ಸಿವಿಲ್ ಮತ್ತು ಕ್ರಿಮಿನಲ್ ಹೊಣೆಗಾರಿಕೆಗಳಿಂದ ರಕ್ಷಣೆ ಮಾಡಲು ಉಪಬಂಧ ಕಲ್ಪಿಸುವುದಕ್ಕಾಗಿ ಒಂದು ಶಾಸನವನ್ನು ತರಲು ಉದ್ದೇಶಿಸಲಾಗಿದೆ. ಉದ್ದೇಶಿತ ಶಾಸನವು ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳ ಹೊಣೆಗಾರಿಕೆಗಳನ್ನು ಹಾಗೂ ಅದಕ್ಕೆ ಸಂಬಂಧಿಸಿದ ವಿಷಯಗಳನ್ನು ಹಾಗೂ ವೈದ್ಯಕೀಯ ಚಿಕಿತ್ಸೆಯನ್ನು ನೀಡುವಲ್ಲಿ ಕಾಲ ವಿಳಂಬವಾಗದಿರುವುದನ್ನು ಖಚಿತಪಡಿಸಿಕೊಳ್ಳುವುದು ಮತ್ತು ರೋಗಿಯ ಜೀವದ ರಕ್ಷಣೆಯನ್ನು ವಿವರಿಸುತ್ತದೆ.

ಆದ್ದರಿಂದ, ಈ ವಿಧೇಯಕ.

## ಆರ್ಥಿಕ ಜ್ಞಾಪನ ಪತ್ರ

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ಒಂದು ವರ್ಷಕ್ಕೆ ಅಂದಾಜು ಐದು ಕೋಟಿ ರೂಪಾಯಿಗಳ ವೆಚ್ಚ ಉಂಟಾಗುತ್ತದೆ.

## ಪ್ರತ್ಯಾಯೋಜಿತ ಶಾಸನ ರಚನಾಧಿಕಾರದ ಕುರಿತ ಜ್ಞಾಪನ ಪತ್ರ

| | | |
|---|---|---|
| **ಖಂಡ 10** | ಈ ಅಧಿನಿಯಮದ ಉಪಬಂಧಗಳನ್ನು ಉಲ್ಲಂಘಿಸುವ ಮತ್ತು ಅಪರಾಧದ ತಪ್ಪಿತಸ್ಥನಾಗಿರುವ ಮತ್ತು ದಂಡಕ್ಕೆ ಗುರಿಯಾದ ಯಾವೊಬ್ಬ ಪೊಲೀಸು ಅಧಿಕಾರಿಯ ವಿರುದ್ಧ ಶಿಸ್ತು ಕ್ರಮವನ್ನು ಜರುಗಿಸುವ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 11** | (i) | (2)ನೇ ಉಪಖಂಡದ (ಬಿ) ಬಾಬುವು, ಜೀವರಕ್ಷಕ ನಿಧಿಯ ಅಂಥ ಇತರ ಮೂಲಗಳ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (ii) | (3)ನೇ ಉಪಖಂಡವು, ಜೀವರಕ್ಷಕ ನಿಧಿಯ ಬಳಕೆಯ ವಿಧಾನದ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| | (iii) | (4)ನೇ ಉಪಖಂಡವು, ಭರಿಸಲಾದ ಚಾರ್ಜುಗಳು ಅಥವಾ ವೆಚ್ಚಗಳ ಮರುಪಾವತಿಗಾಗಿ ಆಸ್ಪತ್ರೆಯ ಮೂಲಕ ಸಲ್ಲಿಸಬೇಕಾದ ಅರ್ಜಿಯ ನಮೂನೆ, ವಿಧಾನ ಮತ್ತು ಅಂಥ ಅರ್ಜಿಯನ್ನು ಸಲ್ಲಿಸಬೇಕಾದ ಅವಧಿಯ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. |
| **ಖಂಡ 14** | (ii)ನೇ ಬಾಬುವು, ಜೀವರಕ್ಷಕನು ಭರಿಸಿದ ಸಕಾರಣಿಕ ವೆಚ್ಚಗಳು ಮತ್ತು ಆತನ ದಿನಗೂಲಿಯ ನಷ್ಟದ ಹೆಚ್ಚಿನ ಮೊತ್ತದ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 22** | ಯುಕ್ತ ಪ್ರಾಧಿಕಾರದ ಆದೇಶದ ವಿರುದ್ಧ ಅಪೀಲನ್ನು ಸಲ್ಲಿಸಬೇಕಾದ ಮೇಲ್ಮನವಿ ಪ್ರಾಧಿಕಾರದ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 23** | ಅಧಿನಿಯಮದ ಎಲ್ಲಾ ಅಥವಾ ಯಾವುದೇ ಉದ್ದೇಶಗಳನ್ನು ಪೂರ್ವ ಪ್ರಕಟಣೆಯ ತರುವಾಯ ಕೈಗೊಳ್ಳುವುದಕ್ಕೆ ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 25** | (1)ನೇ ಉಪಖಂಡವು, ವಾರ್ಷಿಕ ವರದಿಯನ್ನು ಸಿದ್ಧಪಡಿಸಲು ನಮೂನೆ ಮತ್ತು ಅವಧಿಯ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 26** | ಲೆಕ್ಕಪತ್ರಗಳ ಪುಸ್ತಕಗಳು, ಇತರ ರಿಜಿಸ್ಟರುಗಳು ಮತ್ತು ವಾರ್ಷಿಕ ಲೆಕ್ಕಪತ್ರಗಳ ತ:ಖ್ತೆಗಳನ್ನು ಸಿದ್ದಪಡಿಸುವ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |
| **ಖಂಡ 27** | (1)ನೇ ಉಪಖಂಡವು, ಹನ್ನೆರಡು ವರ್ಷಗಳ ವಯಸ್ಸನ್ನು ದಾಟಿದ ಪ್ರತಿಯೊಬ್ಬ ವಿದ್ಯಾರ್ಥಿಗೆ ನಿಯಮಿಸಿದ ಅವಧಿಗಾಗಿ ಶಿಕ್ಷಣ ಸಂಸ್ಥೆಗಳ ಮೂಲಕ ಪ್ರಥಮ ಚಿಕಿತ್ಸೆ ಮತ್ತು ತುರ್ತುನಿಗಾ ತರಬೇತಿಯನ್ನು ನೀಡುವ ಕುರಿತು ನಿಯಮಗಳನ್ನು ರಚಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರವನ್ನು ನೀಡುತ್ತದೆ. | |

ಪ್ರಸ್ತಾವಿತ ಶಾಸನ ರಚನಾಧಿಕಾರದ ಪ್ರತ್ಯಾಯೋಜನೆಯು ವಾಡಿಕೆಯ ಸ್ವರೂಪದ್ದಾಗಿದೆ.

**ಕೆ.ಆರ್.ರಮೇಶ್ ಕುಮಾರ್**
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಿಗಳು

**ಎಸ್. ಮೂರ್ತಿ**
ಕಾರ್ಯದರ್ಶಿ (ಪ್ರ)
ಕರ್ನಾಟಕ ವಿಧಾನಸಭೆ.

**KARNATAKA LEGISLATIVE ASSEMBLY**
**FOURTEENTH LEGISLATIVE ASSEMBLY**
**TWELFTH SESSION**

# THE KARNATAKA GOOD SAMARITAN AND MEDICAL PROFESSIONAL (PROTECTION AND REGULATION DURING EMERGENCY SITUATIONS) BILL, 2016

**(L.A. Bill No. 35 of 2016)**

A Bill to provide for protection to Good Samaritans and Medical Professionals from civil and criminal liabilities, by establishing supportive legal environment, obligations of hospitals and clinics and for matters connected therewith or incidental thereto;

Whereas it is expedient to provide for protection to Good Samaritans and Medical Professionals from civil and criminal liabilities, by establishing supportive legal environment, obligations of hospitals and clinics and for matters connected therewith or incidental thereto;

Be it enacted by the Karnataka State Legislature in the Sixty seventh Year of the Republic of India as follows;-

## CHAPTER I
## PRELIMINARY

**1. Short title and commencement.-** (1) This Act may be called the Karnataka Good Samaritan and Medical Professional (Protection and Regulation During Emergency Situations) Act, 2016.

(2) It shall come into force on such date as the State Government may, by notification, appoint.

**2. Definitions.-** In this Act, unless the context otherwise requires,-

(a) 'Accident' means the unforeseen, unexpected or unintentional occurrence of an event which results in the risk of death or injury to any person and includes road, rail, water or air accident;

(b) 'Appropriate authority' means an authority appointed by the Government;

(c) 'Bystander' means any person including a passer by who is an eye witness to an accident or incident of crime or any other emergency situation;

(d) 'Code' means the Code of Criminal Procedure, 1973 (central Act 2 of 1974);

(e) 'Emergency care' means any reasonable measure to render first-aid, advise or assistance to an injured person of an accident or incident of crime or any other emergency situation at the scene of an accident or during transit to a place where actual medical treatment may be administered or inside a hospital;

(f) 'Emergency situations' means a medical condition manifesting itself by symptoms of sufficient severity of such a nature that the absence of immediate medical attention could reasonably place the health and life of the person affected to risk or serious impairment to bodily functions or serious dis-function of any organ or part of the body;

(g) 'First –aid` means the immediate basic care given to an injured person of an accident or crash or incident of crime or any other emergency situation so as to stabilise his condition by any person including a medical professional before any decisive treatment;

(h) 'Government' means the Government of Karnataka;

(i) 'Good Samaritan' means a person who, in good faith, without expectation of reward and without any duty of care or special relationship, voluntarily comes forward to administer emergency care to an injured person;

(j) 'Hospital' means any institution by whatever name called that renders medical, surgical, therapeutic, diagnostic treatments, Medical care, facilities or services and includes a teaching hospital and all such similar institution;

(k) 'Incident of crime' includes any offence under the Indian Penal Code, 1860 (Central Act 45 of 1960)that causes physical or bodily harm to person;

(l) 'Injured person' shall include a person at risk of injury or a person in need of emergency care or treatment due to an accident or incident of crime or any other emergency situation;

(m) 'Medical professional' means a doctor, surgeon, physician, nurse, hospital attendant, paramedical staff or any other person licensed or certified, responding to a medical emergency as part of their professional or statutory duty or part of employment, with the rendering of actual medical treatment;

(n) 'Medico-legal form' means any document which hospital is required to prepare in relation to any proceedings conducted in a hospital having legal implications;

(o) 'Medical Procedure' means the initial examination, diagnosis or check-up conducted by a hospital or medical professional on any injured person, so as to determine the type of treatment that is necessary if any, to stabilize the condition of such injured person;

(p) 'Special relationship' means any of the following relationships, namely:-
  (i) Doctor and patient;
  (ii) Employer and employee;
  (iii) Immediate family, including husband, wife, children and parents; and
  (iv) Guardian or any other person in lawful charge under any law in force at the time;

(q) 'Stabilize' means the rendering of any immediate emergency care of the injured person as may be necessary to assure within reasonable medical probability, that no material deterioration of the condition of such injured person is likely to result from or occur during the transfer of such injured person from one hospital to another, where such appropriate facilities are available to render the requisite treatment;

(r) 'Transfer' means the movement including discharge of an injured person outside a hospital at the direction and assistance of any person employed by, or associated, directly or indirectly, with the hospital, but does not include such a movement of an individual who,-
  (i) has been declared dead; or
  (ii) leaves the hospital without the permission of any such person.

(s) 'treatment' means the rendering of appropriate medical care, facilities or services by a medical professional to an injured person, which includes first aid, emergency care and medical surgical, therapeutic and diagnostic treatment.

## CHAPTER II
## PROTECTION FOR GOOD SAMARITANS

**3. Protection for Good Samaritan from Civil or Criminal Liability.-**(1) A Good Samaritan shall not incur any civil or criminal liability for an act done or omission made while providing emergency care to an injured person, when such an act or omission is made in good faith;-

(i) with the consent of the injured person, whether express or implied; or

(ii) if the circumstances are such that it is impossible for such person to signify consent, then without the consent of the injured person; or

(iii) if the injured person is incapable of giving consent, with the consent of his guardian or other person in lawful charge of him, or if he has no guardian or other person in lawful charge of him from whom it is possible to obtain consent in time to provide emergency care, then without such consent:

Provided that the protection from civil liability shall not apply if the good Samaritan is grossly negligent or reckless in connection with the act done or omission made while providing emergency care.

Provided further that the protection from criminal liability shall not extend to,-

(a) the intentional causing of death, or the attempting to cause death;

(b) the doing of anything which the person doing it knows to be likely to cause death; for any purpose other than the preventing of death or grievous injury;

(c) the voluntary causing of hurt, or the attempting to cause hurt, for any purpose other than the preventing of death or hurt; and

(d) the abetment of any offence, to the committing of which offence it would not extend.

(2) Where, a person, or a group of persons, brings an injured person to a hospital and an acknowledgement under sub section (3) of section 4 is issued to each of them by the said hospital, the Court shall presume all such persons to be Good Samaritans.

**4. Rights of Good Samaritan.-** (1) A Good Samaritan shall not be required to,-

(a) furnish any of his own personal information such as his name, telephone number and address at the hospital including for the preparation of a medico-legal form; or

(b) fulfil any procedure related to the admission of an injured person at a hospital; or

(c) bear any medical expenses towards the treatment of an injured person at a hospital.

| ಕ್ರ. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿಗೆ |
|---|---|---|---|---|---|
| 651 | ರಾಮನಗರ | ನಾಡಕಛೇರಿ | ಕೂಡಿಗೆ ಹಳ್ಳಿ | ಉಪ ತಹಸೀಲ್ದಾರ್ ನಾಡ ಕಛೇರಿ , ಕೂಡಿಗೆ ಹಳ್ಳಿ, ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ KANAKAPURA ತಾಲ್ಲೂಕುಬೆಂಗಳೂರು 562119 | 080-27541123 |
| 652 | ರಾಮನಗರ | ನಾಡಕಛೇರಿ | ಮರಳವಾಡಿ | ಉಪ ತಹಸೀಲ್ದಾರ್ ನಾಡಕಛೇರಿ ಮರಳವಾಡಿ ಪೋಸ್ಟ್ , ಯೂಕೋ ಬ್ಯಾಂಕ್ ರಸ್ತೆ, ಕನಕಪುರತಾಲ್ಲೂಕು ಬೆಂಗಳೂರು-562112 | 080-27571229 |
| 653 | ರಾಮನಗರ | ನಾಡಕಛೇರಿ | ಸಾತನೂರು | ಉಪ ತಹಸೀಲ್ದಾರ್ ನಾಡಕಛೇರಿ ಸಾತನೂರು ಪೊಲೀಸ್ ಸ್ಟೇಷನ್ ಹತ್ತಿರ, ಕನಕಪುರ ತಾಲ್ಲೂಕು, ರಾಮನಗರ-562117 | 080-27551133 |
| 654 | ರಾಮನಗರ | ನಾಡಕಛೇರಿ | ದೊಡ್ಡಲಹಳ್ಳಿ | ಉಪ ತಹಸೀಲ್ದಾರ್ ನಾಡಕಛೇರಿ ದೊಡ್ಡಲಹಳ್ಳಿ ಕನಕಪುರ ತಾಲ್ಲೂಕು, ರಾಮನಗರ ಜಿಲ್ಲೆ 562117 | 080-27532228 |
| 655 | ರಾಮನಗರ | ನಾಡಕಛೇರಿ | ಕುದೂರು | ಉಪ ತಹಸೀಲ್ದಾರ್ ,**ಕುದೂರು** ನಾಡ ಕಛೇರಿ ಕುದೂರು, ಕೆನರಾ ಬ್ಯಾಂಕ್ ಹತ್ತಿರ, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ-561 101 | 080-27762036 |
| 656 | ರಾಮನಗರ | ನಾಡಕಛೇರಿ | ಮದಬಾಲ್ | ಉಪ ತಹಸೀಲ್ದಾರ್ ಮದಬಾಲ್, ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ | |
| 657 | ರಾಮನಗರ | ನಾಡಕಛೇರಿ | ಮಾಗಡಿ | ತಹಸೀಲ್ದಾರ್, **ಕಸಬಾ** ಹೋಬಳಿ, ಮಾಗಡಿ ತಾಲ್ಲೂಕುತಾಲ್ಲೂಕುಕ ರಾಮನಗರ ಜಿಲ್ಲೆ | 080-27745078 |
| 658 | ರಾಮನಗರ | ನಾಡಕಛೇರಿ | ಸೋಲೂರು | ಉಪ ತಹಸೀಲ್ದಾರ್ **ಸೋಲೂರು** ನಾಡಕಛೇರಿ ಸೋಲೂರು ಮುಖ್ಯರಸ್ತೆ, ಸೋಲೂರು ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ 562127 | 080-27757027 |
| 659. | ರಾಮನಗರ | ನಾಡಕಛೇರಿ | ತಿಪ್ಪಸಂದ್ರ | ಉಪ ತಹಸೀಲ್ದಾರ್, ತಿಪ್ಪಸಂದ್ರ ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ 562131 | 080-27765011 |
| 660. | ರಾಮನಗರ | ನಾಡಕಛೇರಿ | ಬಿಡದಿ | ಉಪ ತಹಸೀಲ್ದಾರ್ ಕಛೇರಿ - ಬಿಡದಿ ರಾಮನಗರ ಜಿಲ್ಲೆ- 562109 | 080-27282030 |
| 661. | ರಾಮನಗರ | ನಾಡಕಛೇರಿ | **ನಾಡಕಛೇರಿ** | ನಾಡಕಛೇರಿ - | -27307125 |
| 662. | ರಾಮನಗರ | ನಾಡಕಛೇರಿ | ಕೂಟಗಲ್ | ಉಪ ತಹಸೀಲ್ದಾರ್, 0/1, ಕಛೇರಿ ಉಪ ತಹಸೀಲ್ದಾರ್, ನಾಡಕಛೇರಿ, ಕೂಟಗಲ್ , ರಾಮನಗರ ಜಿಲ್ಲೆ 571511 | 080-27284009 |
| 663. | ರಾಮನಗರ | ನಾಡಕಛೇರಿ | ರಾಮನಗರ | ತಹಶೀಲ್ದಾರ್, ಕಛೇರಿ ರಾಮನಗರ ತಾಲ್ಲೂಕು, ತಾಲ್ಲೂಕುಕಛೇರಿ, ರಾಮನಗರ-562159 | 080-27273326 |
| 664. | ದಾವಣಗೆರೆ | ನಾಡಕಛೇರಿ | ಚೆನ್ನಗಿರಿ | ತಾಲ್ಲೂಕು ಕಛೇರಿ., ಚೆನ್ನಗಿರಿ ದಾವಣಗೆರೆ | 08189-227227 |

| ಕ್ರ.. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿಗೆ |
|---|---|---|---|---|---|
| 665. | ಶಿವಮೊಗ್ಗ | ನಾಡಕಛೇರಿ | ಅಣವೆರಿ | ಉಪ ತಹಸೀಲ್ದಾರ್ ನಾಡ ಕಛೇರಿ ಅಣವೆರಿ, 577243 | 08282-244045 |
| 666. | ಶಿವಮೊಗ್ಗ | ನಾಡಕಛೇರಿ | ಹೊಳೆನೊನ್ನೂರು | ಉಪ ತಹಸೀಲ್ದಾರ್ ನಾಡಕಛೇರಿ<br>ಮಹಾತ್ಮಾಗಾಂದಿ ವೃತ್ತ<br>ಹೊಳೆನೊನ್ನೂರು 577227 | 08282-235028 |
| 667. | ಶಿವಮೊಗ್ಗ | ನಾಡಕಛೇರಿ | ಹೊಳೆನೊನ್ನೂರು-2 | ಉಪ ತಹಸೀಲ್ದಾರ್, ನಾಡಕಛೇರಿ,<br>ಕಳ್ಳಿಹಾಳ್, ಅರೆಬಿಳಚಿ, ಭದ್ರಾವತಿ ಶಿವಮೊಗ್ಗ-577233 | 08282-236085 |
| 668. | ಶಿವಮೊಗ್ಗ | ನಾಡಕಛೇರಿ | ಹೊಳೆನೊನ್ನೂರು-3 | ಉಪತಹಸೀಲ್ದಾರ್,ನಾಡಕಛೇರಿ ಹೊಳೆನೊನ್ನೂರು ,. ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | 08282-244045 |
| 669. | ಶಿವಮೊಗ್ಗ | ನಾಡಕಛೇರಿ | ಹೊಳೆನೊನ್ನೂರು-3 | ಉಪ ತಹಸೀಲ್ದಾರ್ ಕಛೇರಿ, ಜನಸ್ನೇಹಿ ಕೇಂದ್ರ, ಮಹಾತ್ಮಗಾಂಧಿ ವೃತ್ತ, ಹೊಳೆಹೊನ್ನೂರು ಹೋಬಳಿ, ಭದ್ರಾವತಿ, ಶಿವಮೊಗ್ಗ ಜಿಲ್ಲೆ | |
| 670. | ಶಿವಮೊಗ್ಗ | ನಾಡಕಛೇರಿ | ಕೂಡ್ಲಿಗೆರೆ | ಉಪ ತಹಸೀಲ್ದಾರ್,ನಾಡಕಛೇರಿ, ಕೂಡ್ಲಿಗೆರೆ ಶಿವಮೊಗ್ಗ ಜಿಲ್ಲ.-577233 | 08282-236086 |
| 671. | ಶಿವಮೊಗ್ಗ | ನಾಡಕಛೇರಿ | ಭದ್ರಾವತಿ | ಉಪ ತಹಸೀಲ್ದಾರ್ ಉಪ ರವರ ಕಛೇರಿ, ಅಟಲ್ ಜೀ ಜನಸ್ನೇಹಿ ಕೇಂದ್ರ, ಕಸಬ ಹೋಬಳಿ, ಭದ್ರಾವತಿ, ಹೊಸನಗರ | 08282-261010 |
| 672. | ಶಿವಮೊಗ್ಗ | ನಾಡಕಛೇರಿ | ಹೊಸನಗರ | ಉಪ ತಹಸೀಲ್ದಾರ್, ನಾಡಕಛೇರಿ ತಾಲ್ಲೂಕುಕಛೇರಿ, ಹೊಸನಗರ | 08185-221151 |
| 673. | ಶಿವಮೊಗ್ಗ | ನಾಡಕಛೇರಿ | ಹುಂಚ | ಉಪ ತಹಸೀಲ್ದಾರ್,ನಾಡಕಛೇರಿ, ಹುಂಚ, ಹೊಸನಗರ ಶಿವಮೊಗ್ಗ ಜಿಲ್ಲೆ.-577436 | 08185-262218 |
| 674. | ಶಿವಮೊಗ್ಗ | ನಾಡಕಛೇರಿ | ಕೆರೆಹಳ್ಳಿ | ಉಪ ತಹಸೀಲ್ದಾರ್,ನಾಡಕಛೇರಿ. ಕೆರೆಹಳ್ಳಿ ರಿಬ್ಬನ್ ಪೇಟ್, ಹೊಸನಗರ ತಾಲ್ಲೂಕು, ,ಶಿವಮೊಗ್ಗ ಜಿಲ್ಲೆ-577426 | 08185-242094 |
| 675. | ಶಿವಮೊಗ್ಗ | ನಾಡಕಛೇರಿ | ನಾಡಕಛೇರಿ | **ಇನಾಗರ** 577425 | 08185-243466 |
| 676. | ಶಿವಮೊಗ್ಗ | ನಾಡಕಛೇರಿ | ಆನಂದಪುರಂ | ಉಪ ತಹಸೀಲ್ದಾರ್ ನಾಡಕಛೇರಿ ಆನಂದಪುರಂ ಬಸವನಬೀದಿ ಆನಂದಪುರಂ, 577412 | 08183-262074 |
| 677. | ಶಿವಮೊಗ್ಗ | ನಾಡಕಛೇರಿ | ಆವಿನಹಳ್ಳಿ | ಉಪ ತಹಸೀಲ್ದಾರ್ ನಾಡ ಕಛೇರಿ<br>ಆವಿನಹಳ್ಳಿ ವೀರಭದ್ರ ದೇವಸ್ಥಾನದ ಪಕ್ಕ,<br>ಸಿಗಂದೂರು ರಸ್ತೆ | 08183-237674 |
| 678. | ಶಿವಮೊಗ್ಗ | ನಾಡಕಛೇರಿ | ಬಾರಂಗಿ | ಉಪ ತಹಸೀಲ್ದಾರ್,ನಾಡಕಛೇರಿ, - ಎಸ್.ಎಂ.ಟಿ. ಪಟ್ಟ ಪಂಚಾಯತ್, ಅಯ್ಯಪ್ಪ ಸ್ವಾಮಿ ದೇವಸ್ತಾನದಪಕ್ಕ, ಸಾಗರ, ಶಿವಮೊಗ್ಗ, 577421 | 08186-240174 |
| 679. | ಶಿವಮೊಗ್ಗ | ನಾಡಕಛೇರಿ | ಸಾಗರ | ಉಪ ತಹಸೀಲ್ದಾರ್, ನಾಡಕಛೇರಿ<br>ತಾಲ್ಲೂಕುಕಛೇರಿ, ಸಾಗರ | 08183-220070 |

| ಕ್ರ.. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿ ಗೆದಿಗೆ |
|---|---|---|---|---|---|
| 680. | ಶಿವಮೊಗ್ಗ | ನಾಡಕಛೇರಿ | ತಾಳಗುಪ್ಪ | ಉಪ ತಹಸೀಲ್ದಾರ್ ಕಛೇರಿ, ಡಿ.ಸಿ.ಸಿ. ಬ್ಯಾಂಕ್ ಕೆಳಮಹಡಿ, ವೀರಭದ್ರ ಟೆಂಪಲ್ ರಸ್ತೆ, ತಾಳಗುಪ್ಪ, 577430 | 08183-254274 |
| 681. | ಶಿವಮೊಗ್ಗ | ನಾಡಕಛೇರಿ | ಅಂಜನಾಪುರ | ಉಪ ತಹಶೀಲ್ದಾರ್ ನಾಡಕಛೇರಿ , ಅಂಜನಾಪುರ, ಹಳೇ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕಟ್ಟಡ, ಹಿತ್ಲಾ ಶಿವಮೊಗ್ಗ-577214 | 08187-243067 |
| 682. | ಶಿವಮೊಗ್ಗ | ನಾಡಕಛೇರಿ | ಹೊಸೂರು | ಉಪ ತಹಸೀಲ್ದಾರ್,ನಾಡ ಕಛೇರಿ, ಹೊಸೂರು ಶಿಕಾರಿಪುರ ತಾಲ್ಲೂಕು ಶಿವಮೊಗ್ಗ ಜಿಲ್ಲೆ577427 | 08187-236755 |
| 683. | ಶಿವಮೊಗ್ಗ | ನಾಡಕಛೇರಿ | ಶಿಕಾರಿಪುರ | ಉಪ ತಹಸೀಲ್ದಾರ್,ನಾಡ ಕಛೇರಿ ವಿಧಾನ ಸೌಧ, ಶಿಕಾರಿಪುರ, ಶಿವಮೊಗ್ಗ-577427 | 08187-222089 |
| 684. | ಶಿವಮೊಗ್ಗ | ನಾಡಕಛೇರಿ | ತಾಳಗುಂಡ | ಉಪ ತಹಸೀಲ್ದಾರ್,ನಾಡ ಕಛೇರಿ , ತಾಳಗುಂಡ ಬೆಳ್ಳಿಗಾವಿ ಹಳೆ ಗ್ರಾಮ ಪಂಚಾಯತ್ ಕಟ್ಟಡ, ತಾಳಗುಂಡ, ಹೋಬಳಿ 577 450 577450 | 08187-233004 |
| 685. | ಶಿವಮೊಗ್ಗ | ನಾಡಕಛೇರಿ | ಉದಗಣಿ | ಉಪ ತಹಸೀಲ್ದಾರ್,ನಾಡ ಕಛೇರಿ , ನಾಡಕಛೇರಿ ಉದಗಣಿ , ಶಿರಾಳಕೊಪ್ಪ 577428 | 08187-233045 |
| 686. | ಶಿವಮೊಗ್ಗ | ನಾಡಕಛೇರಿ | ಹರನಹಳ್ಳಿ | ಉಪ ತಹಸೀಲ್ದಾರ್ ನಾಡ ಕಛೇರಿ ಹರನಹಳ್ಳಿ 577416 | 08182-230004 |
| 687. | ಶಿವಮೊಗ್ಗ | ನಾಡಕಛೇರಿ | ಹೊಳಲೂರು | ಉಪ ತಹಸೀಲ್ದಾರ್ ,ನಾಡಕಛೇರಿ ಹಳೆ ಎಇಇ ಕಛೇರಿ **ತುಂಗಾ ಮೇಲ್ದಂಡೆ ಯೋಜನೆ ಪ್ರಾಜೆಕ್ಟ ಕ್ಯಾಂಪ್ ಆವರಣ** ಹೊಳಲೂರು 577216 | 08182-245324 |
| 688. | ಶಿವಮೊಗ್ಗ | ನಾಡಕಛೇರಿ | ಕುಂಶಿ ನಾಡಕಛೇರಿ- | ಉಪ ತಹಸೀಲ್ದಾರ್ ನಾಡಕಛೇರಿ , ಕುಂಶಿ 577423 | 08182-262340 |
| 689. | ಶಿವಮೊಗ್ಗ | ನಾಡಕಛೇರಿ | ನಿಡಿಗಿ | ಉಪ ತಹಸೀಲ್ದಾರ್ ನಾಡಕಛೇರಿ ನಿಡಿಗಿ ಶ್ರೀಗಂಧ ಕಾಲೋನಿ, ಭದ್ರಾವತಿ ರಸ್ತೆ ಶಿವಮೊಗ್ಗ | 08182-240080 |
| 690. | ಶಿವಮೊಗ್ಗ | ನಾಡಕಛೇರಿ | ಶಿವಮೊಗ್ಗ | ತಹಸೀಲ್ದಾರ್ ಶಿವಮೊಗ್ಗ-ತಾಲ್ಲೂಕುಹಳೆ **ಡಿ.ಓ** ಕಛೇರಿ **ಆವರಣ,** ಶಿವಮೊಗ್ಗ -577201 | 08182-220004 |
| 691. | ಶಿವಮೊಗ್ಗ | ನಾಡಕಛೇರಿ | ಸೊರಬ | ಉಪ ತಹಸೀಲ್ದಾರ್, ನಾಡಕಛೇರಿ ತಾಲ್ಲೂಕು ಕಛೇರಿ, ಸೊರಬ | 08184-270060 |
| 692. | ಶಿವಮೊಗ್ಗ | ನಾಡಕಛೇರಿ | ಆಣವಟ್ಟಿ | ಉಪ ತಹಸೀಲ್ದಾರ್ ನಾಡ ಕಛೇರಿ ಆಣವಟ್ಟಿ | 08184-267525 |
| 693. | ಶಿವಮೊಗ್ಗ | ನಾಡಕಛೇರಿ | ಚಂದ್ರಗುತ್ತಿ | ಉಪ ತಹಸೀಲ್ದಾರ್ ನಾಡ ಕಛೇರಿ ಚಂದ್ರಗುತ್ತಿ | 08184-262544 |
| 694. | ಶಿವಮೊಗ್ಗ | ನಾಡಕಛೇರಿ | ಜಡೆ ನಾಡಕಛೇರಿ | ಉಪ ತಹಸೀಲ್ದಾರ್ ನಾಡ ಕಛೇರಿ ಜಡೆ 577419 | 08184-268599 |
| 695. | ಶಿವಮೊಗ್ಗ | ನಾಡಕಛೇರಿ | ಕುಪ್ಪಗದ್ದೆ ನಾಡಕಛೇರಿ- | ಉಪ ತಹಸೀಲ್ದಾರ್ ನಾಡ ಕಛೇರಿ ಕುಪ್ಪಗದ್ದೆ 577429 | 08184-269799 |

| ಕ್ರ.ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿಗೆ |
|---|---|---|---|---|---|
| 696. | ಶಿವಮೊಗ್ಗ | ನಾಡಕಛೇರಿ | ಉಳವಿ | ಉಪ ತಹಸೀಲ್ದಾರ್ ನಾಡ ಕಛೇರಿ ಉಳವಿ 577434 | 08184-252626 |
| 697. | ಶಿವಮೊಗ್ಗ | ನಾಡಕಛೇರಿ | ಅಗ್ರಹಾರ | ಉಪ ತಹಸೀಲ್ದಾರ್ ನಾಡಕಛೇರಿ ಅಗ್ರಹಾರ,ಕೊಣಂದೂರು, ತೀರ್ಥಹಳ್ಳಿ ತಾಲ್ಲೂಕು .ಶಿವಮೊಗ್ಗ | 08181-276045 |
| 698. | ಶಿವಮೊಗ್ಗ | ನಾಡಕಛೇರಿ | ಆಗುಂಬೆ ನಾಡಕಛೇರಿ- | ಉಪ ತಹಸೀಲ್ದಾರ್ ನಾಡಕಛೇರಿ, ಮೇಗರವಳ್ಳಿಕ ತೀರ್ಥಹಳ್ಳಿ ತಾಲ್ಲೂಕು ಶಿವಮೊಗ್ಗ-577424 | 08181-277455 |
| 699. | ಶಿವಮೊಗ್ಗ | ನಾಡಕಛೇರಿ | ಬೆಜ್ಜವಳ್ಳಿ ನಾಡಕಛೇರಿ- | ಉಪ ತಹಸೀಲ್ದಾರ್ ನಾಡಕಛೇರಿ ಬೆಜ್ಜವಳ್ಳಿ I 577232 | 08181-235040 |
| 700. | ಶಿವಮೊಗ್ಗ | ನಾಡಕಛೇರಿ | ದೇವಂಗಿ ನಾಡಕಛೇರಿ- | ಉಪ ತಹಸೀಲ್ದಾರ್ **ನಾಡ** ಕಛೇರಿ ದೇವಂಗಿ ಪೋಸ್ಟ್ ತೀರ್ಥಹಳ್ಳಿ ತಾಲ್ಲೂಕು -577415 | 08181-274099 |
| 701. | ಶಿವಮೊಗ್ಗ | ನಾಡಕಛೇರಿ | ಮಂದಗದ್ದೆ ನಾಡಕಛೇರಿ- | ಉಪ ತಹಸೀಲ್ದಾರ್ ಕಛೇರಿ ,ಅಟಲ್ ಜೀ ಸ್ನೇಹಕೇಂದ್ರ, ಬೆಜ್ಜವಳ್ಳಿ, ಮಂದಗದ್ದೆ ಶಿವಮೊಗ್ಗ | |
| 702. | ಶಿವಮೊಗ್ಗ | ನಾಡಕಛೇರಿ | ಮುತ್ತೂರು | ಉಪ ತಹಸೀಲ್ದಾರ್ ,ಅಟಲ್ ಜೀ ಸ್ನೇಹಕೇಂದ್ರ ಕೇಂದ್ರ , ದೇವಂಗಿ ಅಂಚೆ, ಮುತ್ತೂರು ಹೋಬಳಿ, ತೀರ್ಥಹಳ್ಳಿ ತಾಲ್ಲೂ, ಶಿವಮೊಗ್ಗ ಜಿಲ್ಲೆ | |
| 703. | ಶಿವಮೊಗ್ಗ | ನಾಡಕಛೇರಿ | ತೀರ್ಥಹಳ್ಳಿ | ಉಪ ತಹಸೀಲ್ದಾರ್ ತಾಲ್ಲೂಕುಕಛೇರಿ ತೀರ್ಥಹಳ್ಳಿ,ಶಿವಮೊಗ್ಗ (ಜಿಲ್ಲೆ) | 08181-220224 |
| 704. | ತುಮಕೂರು | ನಾಡಕಛೇರಿ | ನಾಡಕಛೇರಿ ಸಿ.ಎನ್ ಹಳ್ಳಿ | ತಾಲ್ಲೂಕು ಕಛೇರಿ **ಸಿ.ಎನ್ ಹಳ್ಳಿ** | |
| 705. | ತುಮಕೂರು | ನಾಡಕಛೇರಿ | ಹುಳಯಾರ್ | ನಾಡಕಛೇರಿ. ಹುಳಯಾರ್ , ಚಿಕ್ಕನಾಯಕನಹಳ್ಳಿ, | 08133-256242 |
| 706. | ತುಮಕೂರು | ನಾಡಕಛೇರಿ | ತುಮಕೂರು | ನಾಡಕಛೇರಿ ತುಮಕೂರು 572228 | 08133-266742 |
| 707. | ತುಮಕೂರು | ನಾಡಕಛೇರಿ | ಶೆಟ್ಟಿಕೆರೆ | ನಾಡಕಛೇರಿ , ಶೆಟ್ಟಿಕೆರೆ, ಚಿಕ್ಕನಾಯಕನಹಳ್ಳಿ | 08133-269642 |
| 708. | ತುಮಕೂರು | ನಾಡಕಛೇರಿ | ಸಿ.ಎಸ್.ಪುರ | ನಾಡಕಛೇರಿ, ಸಿ.ಎಸ್.ಪುರ ಗುಬ್ಬಿ ತಾಲ್ಲೂಕು | 08131-246560 |
| 709. | ತುಮಕೂರು | ನಾಡಕಛೇರಿ | ಚೇಲೂರು | ನಾಡಕಛೇರಿ. ಚೇಲೂರು | 08131-242090 |
| 710. | ತುಮಕೂರು | ನಾಡಕಛೇರಿ | ಗುಬ್ಬಿ | ನಾಡಕಛೇರಿ ಎಂ.ಜಿ ರಸ್ತ ಗುಬ್ಬಿ., ತುಮಕೂರು-572216 | 08131-222110 |
| 711. | ತುಮಕೂರು | ನಾಡಕಛೇರಿ | ನಾಡಕಛೇರಿ | | -241024 |
| 712. | ತುಮಕೂರು | ನಾಡಕಛೇರಿ | ನಾಡಕಛೇರಿ ಕಡಬ | ನಾಡಕಛೇರಿ- ಕಡಬ | 08131-231077 |
| 713. | ತುಮಕೂರು | ನಾಡಕಛೇರಿ | ನಿಟ್ಟೂರು | ನಾಡಕಛೇರಿ. ನಿಟ್ಟೂರು, ಗುಬ್ಬಿ ತಾಲ್ಲೂಕು | 08131-230095 |
| 714. | ತುಮಕೂರು | ನಾಡಕಛೇರಿ | ಚೆನ್ನರಾಯನದುರ್ಗ | ನಾಡಕಛೇರಿ. ಚೆನ್ನರಾಯನದುರ್ಗ, ಕೊರಟಗೆರೆ ತಾಲ್ಲೂಕು, | 08138-239050 |
| 715. | ತುಮಕೂರು | ನಾಡಕಛೇರಿ | ಹೊಳವನಹಳ್ಳಿ | ನಾಡಕಛೇರಿ. ಹೊಳವನಹಳ್ಳಿ ,ಕೊರಟಗೆರೆ ತಾಲ್ಲೂಕು, | 08138-234010 |
| 716. | ತುಮಕೂರು | ನಾಡಕಛೇರಿ | ಕೊಳಾಳ್ | ನಾಡಕಛೇರಿ. ಕೊಳಾಳ್ | 08138-236610 |

| ಕ್ರ.. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿಗೆ |
|---|---|---|---|---|---|
| | | | | ಕೊರಟಗೆರೆ ತಾಲ್ಲೂಕು,- 572140 | |
| 717. | ತುಮಕೂರು | ನಾಡಕಛೇರಿ | ಕೊರಟಗೆರೆ | ಉಪ ತಹಸೀಲ್ದಾರ್, ನಾಡ ಕಛೇರಿ ಕಛೇರಿ, , ಮುಖ್ಯ ರಸ್ತೆ , ಕೊರಟಗೆರೆ 572129 ರ | 08138-232015 |
| 718. | ತುಮಕೂರು | ನಾಡಕಛೇರಿ | ಅಮೃತ್ತೂರು | ನಾಡಕಛೇರಿ. ಅಮೃತ್ತೂರು<br>ಕುಣಿಗಲ್ ತಾಲ್ಲೂಕು, | 08132-225008 |
| 719. | ತುಮಕೂರು | ನಾಡಕಛೇರಿ | ಹುತ್ರಿ ದುರ್ಗ | ನಾಡಕಛೇರಿ. ಹುತ್ರಿ ದುರ್ಗ ಕುಣಿಗಲ್ ತಾಲ್ಲೂಕು, | 08132-227018 |
| 720. | ತುಮಕೂರು | ನಾಡಕಛೇರಿ | ಕೋತಗೆರೆ | ನಾಡಕಛೇರಿ, ಕೋತಗೆರೆ | A/C 5133166NOA9 |
| 721. | ತುಮಕೂರು | ನಾಡಕಛೇರಿ | ಕುಣಿಗಲ್ | ನಾಡಕಛೇರಿ ಕಛೇರಿ, ಕುಣಿಗಲ್ | 08132 220118 |
| 722. | ತುಮಕೂರು | ನಾಡಕಛೇರಿ | ಯಡಿಯೂರು | ನಾಡಕಛೇರಿ ಯಡಿಯೂರು ಕುಣಿಗಲ್ ತಾಲ್ಲೂಕು,572142 | 08132-228288 |
| 723. | ತುಮಕೂರು | ನಾಡಕಛೇರಿ | ದೊಡ್ಡೇರಿ | ನಾಡಕಛೇರಿ ಮಧುಗಿರಿ ತಾಲ್ಲೂಕು | 08137-284510 |
| 724. | ತುಮಕೂರು | ನಾಡಕಛೇರಿ | ನಾದಕಾಚೇರಿ ಐ.ಡಿ. ಹಳ್ಳಿ | ನಾಡಕಛೇರಿ ನಾದಕಾಚೇರಿ ಐ.ಡಿ. ಹಳ್ಳಿ, ಮಧುಗಿರಿ ತಾಲ್ಲೂಕು 572124 | 08137-281810 |
| 725. | ತುಮಕೂರು | ನಾಡಕಛೇರಿ | ಕೊಡಿಗೇನಹಳ್ಳಿ, I | ನಾಡಕಛೇರಿ. ಕೊಡಿಗೇನಹಳ್ಳಿ,<br>ಮಧುಗಿರಿ ತಾಲ್ಲೂಕು 572127 | 08137-279330 |
| 726. | ತುಮಕೂರು | ನಾಡಕಛೇರಿ | ಮಧುಗಿರಿ | ತಾಲ್ಲೂಕುಕಛೇರಿ ಮಧುಗಿರಿ ತಾಲ್ಲೂಕು | 08137-282166 |
| 727. | ತುಮಕೂರು | ನಾಡಕಛೇರಿ | ಮೆಡಿಗೇಶಿ | ನಾಡಕಛೇರಿ. ಮೆಡಿಗೇಶಿ<br>ಮಧುಗಿರಿ ತಾಲ್ಲೂಕು 572133 | 08137-278611 |
| 728. | ತುಮಕೂರು | ನಾಡಕಛೇರಿ | ಪುರುವರ | ನಾಡಕಛೇರಿ ಪುರುವರ ಮಧುಗಿರಿ ತಾಲ್ಲೂಕು | 08137-279000 |
| 729. | ತುಮಕೂರು | ನಾಡಕಛೇರಿ | ಪಾವಗಡ | ನಾಡಕಛೇರಿ ಪಾವಗಡ  ತುಮಕೂರು-561202 | 08136-244091 |
| 730. | ತುಮಕೂರು | ನಾಡಕಛೇರಿ | ನಾಗಲಮಡಿಕೆ | ಉಪ ತಹಸೀಲ್ದಾರ್ ನಾಡ ಕಛೇರಿ ಕಛೇರಿ<br>ನಾಗಲಮಡಿಕೆ ತುಮಕೂರು-572136 | 08136-240833 |
| 731. | ತುಮಕೂರು | ನಾಡಕಛೇರಿ | ನಿದಗಲ್ | ನಾಡಕಛೇರಿ. ನಿದಗಲ್, ಮಂಗಳವಾಡ,<br>ಪಾವಗಡ ತಾಲ್ಲೂಕು | 08136-248440 |
| 732 | ತುಮಕೂರು | ನಾಡಕಛೇರಿ | ಎನ್.ವೈ.ಎನ್. ಹೊಸಕೋಟೆ | ನಾಡಕಛೇರಿ ಎನ್.ವೈ.ಎನ್. ಹೊಸಕೋಟೆ ಪಾವಗಡ 72141 | 08136-247222 |
| 733 | ತುಮಕೂರು | ನಾಡಕಛೇರಿ | ಬುಕ್ಕಾಪಟ್ | ಉಪ ತಹಸೀಲ್ದಾರ್, ನಾಡ ಕಛೇರಿ, ಬುಕ್ಕಾಪಟ್ನ,<br>ಶಿರಾ ತಾಲ್ಲೂಕು, ತುಮಕೂರು-572115 | 08135-271778 |
| 734 | ತುಮಕೂರು | ನಾಡಕಛೇರಿ | ಗೌಡಗೆರೆ | ಉಪ ತಹಸೀಲ್ದಾರ್ ನಾಡಕಛೇರಿ ಗೌಡಗೆರೆ | 08135-272878 |
| 735 | ತುಮಕೂರು | ನಾಡಕಛೇರಿ | ಶಿರಾ | ತಾಲ್ಲೂಕುಕಛೇರಿ ಕಟ್ಟಡ ಶಿರಾ | 08135-277878 |
| 736 | ತುಮಕೂರು | ನಾಡಕಛೇರಿ | ಹೊನ್ನವಳ್ಳಿ | ನಾಡಕಛೇರಿ, ಹೊನ್ನವಳ್ಳಿ  ತಿಪಟೂರು ತಾಲ್ಲೂಕು | 08134-264430 |

| ಕ್ರ. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿಗೆ |
|---|---|---|---|---|---|
| | | | | 572 217 | |
| 737 | ತುಮಕೂರು | ನಾಡಕಛೇರಿ | ಕಿಬ್ಬನಹಾಳ್ | ನಾಡಕಛೇರಿ, ಕಿಬ್ಬನಹಾಳ್<br>ತಿಪಟೂರು ತಾಲ್ಲೂಕು 572114 | 08134-262122 |
| 738 | ತುಮಕೂರು | ನಾಡಕಛೇರಿ | ನೊಣವಿನಕೆರೆ | ನಾಡಕಛೇರಿ, ನೊಣವಿನಕೆರೆ,<br>ತಿಪಟೂರು ತಾಲ್ಲೂಕು 572224 | 08134-258188 |
| 739 | ತುಮಕೂರು | ನಾಡಕಛೇರಿ | ತಿಪಟೂರು | ತಾಲ್ಲೂಕುಕಛೇರಿ ಕಟ್ಟಡ ತಿಪಟೂರು | 08134-250129 |
| 740 | ತುಮಕೂರು | ನಾಡಕಛೇರಿ | ಬೆಳ್ಳಾವಿ | ಉಪ ತಹಶೀಲ್ದಾರ್ ನಾಡಕಛೇರಿ<br>ಬೆಳ್ಳಾವಿ ಪೋಸ್ಟ್ ತುಮಕೂರು 572153 | 0816-2240233 |
| 741 | ತುಮಕೂರು | ನಾಡಕಛೇರಿ | ಹೆಬ್ಬೂರು | ನಾಡಕಛೇರಿ, ಹೆಬ್ಬೂರು ತುಮಕೂರು | 0816-2241533 |
| 742. | ತುಮಕೂರು | ನಾಡಕಛೇರಿ | ಕೋರಾ | ನಾಡಕಛೇರಿ ಕೋರಾ ತುಮಕೂರು,, | 0816-2242233 |
| 743. | ತುಮಕೂರು | ನಾಡಕಛೇರಿ | ತುಮಕೂರು | ಉಪ ತಹಸೀಲ್ದಾರ್ ನಾಡಕಛೇರಿ ತುಮಕೂರು<br>ತಹಸೀಲ್ದಾರ್ ಕಛೇರಿ ಮಿನಿವಿಧಾನಸೌಧ<br>ತುಮಕೂರು | 0816-2251190 |
| 744. | ತುಮಕೂರು | ನಾಡಕಛೇರಿ | ಉರಡಿಗೆರೆ | ನಾಡಕಛೇರಿ, ಉರಡಿಗೆರೆ ತುಮಕೂರು | 0816-2265533 |
| 745. | ತುಮಕೂರು | ನಾಡಕಛೇರಿ | ದಬ್ಬೆಗಟ್ಟ | ನಾಡಕಛೇರಿ, ದಬ್ಬೆಗಟ್ಟ, ತುರುವೇಕೆರೆ ತಾಲ್ಲೂಕು<br>572112 | 08139-289243 |
| 746. | ತುಮಕೂರು | ನಾಡಕಛೇರಿ | ದಂಡಿನವರ | ನಾಡಕಛೇರಿ , ದಂಡಿನವರ, ತುರುವೇಕೆರೆ ತಾಲ್ಲೂಕು<br>572112572227 | 08139-278023 |
| 747. | ತುಮಕೂರು | ನಾಡಕಛೇರಿ | ಮಾಯಸಂದ್ರ | ನಾಡಕಛೇರಿ, ಮಾಯಸಂದ್ರ ತುರುವೇಕೆರೆ ತಾಲ್ಲೂಕು<br>572221 | 08139-277433 |
| 748. | ತುಮಕೂರು | ನಾಡಕಛೇರಿ | ತುರುವೇಕೆರೆ | ನಾಡಕಛೇರಿ, ತುರುವೇಕೆರೆ | |
| 749. | ಉಡುಪಿ | ನಾಡಕಛೇರಿ | - | | -271512 |
| 750. | ಉಡುಪಿ | ನಾಡಕಛೇರಿ | ವಂಡ್ಸೆ | ಉಪ ತಹಶೀಲ್ದಾರರವರ ಕಛೇರಿ, ಎಸ್.ಬಿ.ಸಿ.ಎ<br>ಬ್ಯಾಂಕ್ ಕಟ್ಟಡ, ವಂಡ್ಸೆ 576233 | 08254-239228 |
| 751. | ಉಡುಪಿ | ನಾಡಕಛೇರಿ | ಸಿದ್ದಾಪುರ | ಉಪ ತಹಶೀಲ್ದಾರರವರ ಕಛೇರಿ, ನೆಮ್ಮದಿಕೆಂದ್ರ,<br>ಪಂಚಾಯತ್ ಕಟ್ಟಡ, ಸಿದ್ದಾಪುರ 576239 | |
| 752. | ಉಡುಪಿ | ನಾಡಕಛೇರಿ | ಬೈಂದೂರು | ಉಪ ತಹಸೀಲ್ದಾರ್ ನಾಡಕಛೇರಿ, ಯದಗೆರೆ ಗ್ರಾಮ<br>ಪಂಚಾಯತ್ ಕಟ್ಟಡ, ಬೈಂದೂರು -576214 | 08254-251657 |
| 753. | ಉಡುಪಿ | ನಾಡಕಛೇರಿ | ಬ್ರಹ್ಮಾವರ | ಉಪ ತಹಸೀಲ್ದಾರ್ ನಾಡಕಛೇರಿ 2- ಬ್ರಹ್ಮಾವರ<br>ವರಂಬಳ್ಳಿ ಉಡುಪಿ 576213 | 0820-2560492 |
| 754. | ಉಡುಪಿ | ನಾಡಕಛೇರಿ | ಕೋಟಾ | ಉಪ ತಹಸೀಲ್ದಾರ್I ನಾಡ ಕಛೇರಿ ಕೋಟಾ ಉಡುಪಿ<br>576221 | 0820-2565282 |
| 755. | ಉಡುಪಿ | ನಾಡಕಛೇರಿ | ನಾಡಕಛೇರಿ-<br>ಉಡುಪಿ | ತಹಸೀಲ್ದಾರ್, ನೆಮ್ಮದಿಕೇಂದ್ರ, ಹಳೇ ಡಿ.ಡಿ.ಕಛೇರಿ<br>ಕಟ್ಟಡ, ಬನ್ನಂಜೆ, ಉಡುಪಿ | 0820-2525417 |

| ಕ್ರ. ಸಂ | ಜಿಲ್ಲೆ | ಕಛೇರಿಯ ಹೆಸರು ಮತ್ತು ವಿಳಾಸ | | ತಾಲ್ಲೂಕು ಮತ್ತು ಹೋಬಳಿ ಮಟ್ಟದ ವಿಳಾಸ | ದೂರವಾಣಿ ಸಂಖ್ಯೆ ಪಿನ್ ಕೋಡ್‌ನೊಂದಿ ಗೆದಿಗೆ |
|---|---|---|---|---|---|
| 756. | ಉಡುಪಿ | ನಾಡಕಛೇರಿ | ಕಾಪು | ತಹಸೀಲ್ದಾರ್<br>ಕಾರ್ಪೊರೇಷನ್ ಬ್ಯಾಂಕ್ ಎದುದು , ಪಡು ಹಳ್ಳಿ, ಪುರಉಡುಪಿ,ನಾಡಕಛೇರಿ ಕಾಪು , | 0820-2591444 |
| 757. | ಯಾದಗಿರಿ | ನಾಡಕಛೇರಿ | ದೋರನಹಳ್ಳಿ | ಉಪ ತಹಸೀಲ್ದಾರ್ ನಾಡಕಛೇರಿ ,<br>ಪಂಚಾಯತ್ ಕಟ್ಟಡ, ಸರ್ಕಾರಿ ಆಸ್ಪತ್ರೆ ಹತ್ತಿರ, ದೋರನಹಳ್ಳಿ , ಶಹಪುರ | 08479-212701 |
| 758. | ಯಾದಗಿರಿ | ನಾಡಕಛೇರಿ | ಗೋಗಿ | ಉಪ ತಹಸೀಲ್ದಾರ್, ನಾಡಕಛೇರಿ, ಬಸ್ಸ್ ನಿಲ್ದಾಣದ ಹತ್ತಿರ , ಗೋಗಿ ಶಹಪುರ ಗುಲ್ಬರ್ಗಾ-585309 | 08479-225544 |
| 759. | ಯಾದಗಿರಿ | ನಾಡಕಛೇರಿ | ಹಳಿಯಾಳ (ಬಿ) | ಉಪ ತಹಸೀಲ್ದಾರ್ ಕಛೇರಿ, ಹಳಿಯಾಳ (ಬಿ) | |
| 760. | ಯಾದಗಿರಿ | ನಾಡಕಛೇರಿ | ಕೆಂಭಾವಿ | ನಾಡಕಛೇರಿ, ವಿಭಾಗ-1 ಎಸ್.ಬಿ.ಸಿ. ಕ್ಯಾಂಪ್, ಕೆಂಭಾವಿ ಶಹಪುರ ಯಾದಗಿರಿ I585216 | 08443-278110 |
| 761. | ಯಾದಗಿರಿ | ನಾಡಕಛೇರಿ | ಶಹಪುರ | ಉಪ ತಹಸೀಲ್ದಾರ್( ನಾಡಕಛೇರಿ), ಹಳೆ ತಹಸೀಲ್ ಕಛೇರಿ, ಯಾದಗಿರಿ I ರಸ್ತೆ, ಶಹಪುರ, ಯಾದಗಿರಿ - 585223 | 08479-240033 |
| 762. | ಯಾದಗಿರಿ | ನಾಡಕಛೇರಿ | ಶೋರಾಪುರ | ತಹಸೀಲ್ದಾರ್ ಕಛೇರಿ ಶೋರಾಪುರ ಗುಲ್ಬರ್ಗಾ-585224 | 08443-257073 |
| 763. | ಯಾದಗಿರಿ | ನಾಡಕಛೇರಿ | ಯಾದಗಿರಿ | ತಹಸೀಲ್ದಾರ್ ಕಛೇರಿ, ಜಿಲ್ಲಾ ಪಂಚಾಯತ್ ಕಛೇರಿ, ರೈಲ್ವೆ ನಿಲ್ದಾಣದ ಹತ್ತಿರ ಯಾದಗಿರಿ - 585201 | 08473-252372 |
| 764. | ಯಾದಗಿರಿ | ನಾಡಕಛೇರಿ | ಬಲಿಚಕ್ರ | ಉಪ ತಹಸೀಲ್ದಾರ್ ಕಛೇರಿ, ಐ.ಬಿ, ರಾಯಚೂರು ಮುಖ್ಯ ರಸ್ತೆ ಬಲಿಚಕ್ರ | |
| 765. | ಯಾದಗಿರಿ | ನಾಡಕಛೇರಿ | ಹತ್ತಿಕುಣಿ | ಉಪ ತಹಸೀಲ್ದಾರ್,<br>ನಾಡ ಕಛೇರಿ, ಹತ್ತಿಕುಣಿ, ಉಪ ತಹಸೀಲ್ದಾರ್ ನಾಡ ಕಛೇರಿ, ಯಾದಗಿರಿ -585202 | 08473-212653 |
| 766. | ಯಾದಗಿರಿ | ನಾಡಕಛೇರಿ | ಹುಣಸಗಿ | ವಿಶೇಷ ತಹಸೀಲ್ದಾರ್ ಕಛೇರಿ ಹುಣಸಗಿ ಗುಲ್ಬರ್ಗಾ ಗುಲ್ಬರ್ಗಾ-585215 | 08444-200622 |
| 767. | ಯಾದಗಿರಿ | ನಾಡಕಛೇರಿ | ಕೊಡೆಕಲ್ | ನಾಡಕಛೇರಿ ಉಪ ತಹಸೀಲ್ದಾರ್ ಕಛೇರಿ,<br>ನಾಪಿ.ಡಬ್ಲ್ಯು.ಡಿ. ಕಛೇರಿ ಹತ್ತಿರ, ಯು.ಕೆ.ಪಿ. ಕ್ಯಾಂಪ್, ಕೊಡೆಕಲ್ | 08444-222887 |
| 768. | ಯಾದಗಿರಿ | ನಾಡಕಛೇರಿ | ಕೊಂಕಲ್ | ಉಪ ತಹಸೀಲ್ದಾರ್, ನಾಡ ಕಛೇರಿ,<br>ಕೊಂಕಲ್, ಯಾದಗಿರಿ -585321 | 08473-213725 |

**ರೇವಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*V* | ಬೆಂಗಳೂರು, ಶುಕ್ರವಾರ, ನವೆಂಬರ್ ೧೮, ೨೦೧೬ (ಕಾರ್ತೀಕ ೨೭, ಶಕ ವರ್ಷ ೧೯೩೮) | ನಂ. ೧೨೮೩ |
| ***Part–V*** | ***Bengaluru, Friday, November 18, 2016 (Karthika 27, Shaka Varsha 1938)*** | ***No. 1283*** |


**ಪೊಲೀಸ್ ಇಲಾಖೆ**

## POLCET-2016

### (ISO: 9001-2008 ಪ್ರಮಾಣಿತ ನೇಮಕಾತಿ ಪ್ರಕ್ರಿಯೆ)

**ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ & ಮಹಿಳಾ) ಹುದ್ದೆಗಳ ನೇಮಕಾತಿ**

**ಅಧಿಸೂಚನೆ ಸಂಖ್ಯೆ: 2/ನೇಮಕಾತಿ–4/2016–17**

**ವಿಷಯ:** ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ ಮತ್ತು ಮಹಿಳಾ) (211) ಹುದ್ದೆಗಳ ನೇರ ನೇಮಕಾತಿ ಕುರಿತು.

1. ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಖಾಲಿ ಇರುವ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ ಮತ್ತು ಮಹಿಳಾ) ಖಾಲಿ ಹುದ್ದೆಗಳ ನೇರ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ನೌಕರರ ಸೇವೆಗಳು ಸೇರಿದಂತೆ (ನೇಮಕಾತಿ) ನಿಯಮ 2004 ಮತ್ತು ಅದರ (ತಿದ್ದುಪಡಿ) ನಿಯಮ, 2009, ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ಸೇವೆಗಳನ್ನು ಒಳಗೊಂಡ (ನೇಮಕಾತಿ) (ತಿದ್ದುಪಡಿ) ನಿಯಮಗಳು 2014 & 2016 ಮತ್ತು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013, ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು, 2013 ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಹಾಗೂ ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಈ ಅಧಿಸೂಚನೆಯನ್ನು ಪ್ರಕಟಿಸುತ್ತ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ಆನ್–ಲೈನ್ (On-line) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು, ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.**

**ವಿಶೇಷ ಸೂಚನೆ: ಅರ್ಹ ಅಭ್ಯರ್ಥಿಗಳು "ಅನುಬಂಧ–ಅ" ರಲ್ಲಿ ನೀಡಲಾಗಿರುವ ಖಾಲಿ ಹುದ್ದೆಗಳ ವರ್ಗೀಕರಣವನ್ನು ನೋಡಿ ಅರ್ಜಿ ಸಲ್ಲಿಸುವಂತೆ ಸೂಚಿಸಲಾಗಿದೆ.**

**2. ಶುಲ್ಕ:**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹. 250/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1ಕ್ಕೆ ಸೇರಿದ ಅಭ್ಯರ್ಥಿಗಳಿಗೆ | ₹. 100/– |

ನಿಗದಿತ ಶುಲ್ಕವನ್ನು State Bank of Mysuru / State Bank of Hyderabad ಗಳ ಅಧಿಕೃತ ಶಾಖೆಗಳಲ್ಲಿ ಬ್ಯಾಂಕಿನ ಕಛೇರಿ ವೇಳೆಯಲ್ಲಿ ಚಲನ್ ನೀಡಿ ಶುಲ್ಕ ಪಾವತಿಸಬೇಕು.

**ಟಿಪ್ಪಣಿ:** ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ ಅಥವಾ ಅದನ್ನು ನೇಮಕಾತಿ ಸಮಿತಿಯು ನಡೆಸುವ ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಮೇಲಿನ ಕಾಲಂಗಳಲ್ಲಿ ನಮೂದಿಸಿದಂತೆ ಅಭ್ಯರ್ಥಿಗೆ ಅನ್ವಯಿಸುವ ಶುಲ್ಕವನ್ನು **ನಗದು ರೂಪದಲ್ಲಿ ಮಾತ್ರ** ಮೇಲೆ ನಮೂದಿಸಿದ ಅಧಿಕೃತ ಬ್ಯಾಂಕಿನ ಶಾಖೆಗಳಲ್ಲಿ ಪಾವತಿಸತಕ್ಕದ್ದು. (ಪಾವತಿಸುವ ವಿವರಗಳನ್ನು ಈ ಕೆಳಗಿನ ಪ್ಯಾರಾದಲ್ಲಿ ನೀಡಲಾಗಿದೆ). **ಡಿಡಿ, ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ.**

**3. ಆನ್–ಲೈನ್ (On-line) ಮುಖಾಂತರ ಅರ್ಜಿ ಸಲ್ಲಿಸುವ ಹಾಗೂ ಶುಲ್ಕ ಪಾವತಿಸುವ ವಿಧಾನ :**

ಅರ್ಜಿದಾರ ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಧಿಕೃತ ವೆಬ್‌ಸೈಟ್‌ನಲ್ಲಿರುವ ಮಾಹಿತಿಸೂಚಿ/ಸೂಚನೆಗಳನ್ನು ಜಾಗರೂಕತೆಯಿಂದ ಓದಿಕೊಂಡು ಭರ್ತಿ ಮಾಡಬೇಕು. ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ ನೀಡಲಾಗಿರುವ ಸೂಚನೆಗಳನ್ನು ಓದಿಕೊಂಡು ಇರುವ ಅರ್ಜಿಯನ್ನು ಆನ್‌ಲೈನ್ ಮುಖಾಂತರ ಯಾವುದೇ ತಪ್ಪು ಮಾಹಿತಿಯನ್ನು ನೀಡದೇ ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದ್ದಲ್ಲಿ ಅಂತಹವರ ವಿರುದ್ಧ ಕಾನೂನಿನನ್ವಯ ನೇಮಕಾತಿ ಸಮಿತಿಯು ಸೂಕ್ತ ಕ್ರಮ ಕೈಗೊಳ್ಳುವುದು. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅರ್ಜಿದಾರ ಒಂದು ಬಿಳಿ ಹಾಳೆಯ ಮೇಲೆ ಪಾಸ್‌ಪೋರ್ಟ್ ಅಳತೆಯ ಬಣ್ಣದ ಭಾವಚಿತ್ರ, ಸಹಿ ಮತ್ತು ಅಧಿಸೂಚನೆಯ ಕ್ರಮ ಸಂಖ್ಯೆ 8(ಬಿ)ರಲ್ಲಿ ನಮೂದಿಸಲಾಗಿರುವ ಯಾವುದಾದರು ಗುರುತಿನ ಚೀಟಿಯನ್ನು ಪ್ರತ್ಯೇಕವಾಗಿ (Soft Copy - less than 250 KB) ಸ್ಕ್ಯಾನ್ ಮಾಡಿಟ್ಟುಕೊಂಡಿರಬೇಕು. ನಂತರ ಅರ್ಜಿದಾರನ ಹೆಸರು, ಜಾತಿ, ಮೀಸಲಾತಿಗಳ ವಿವರ, ಹುಟ್ಟಿದ ದಿನಾಂಕ ಮತ್ತು ಇತ್ಯಾದಿ ವಿವರಗಳನ್ನು ಭರ್ತಿ ಮಾಡಿ ಕೊನೆಯದಾಗಿ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ, ಸಹಿ ಮತ್ತು ಗುರುತಿನ ಚೀಟಿಯನ್ನು ಕಂಪ್ಯೂಟರ್ ಮುಖೇನ ಅಪ್‌ಲೋಡ್ (Upload) ಮಾಡುವುದು. ಇಲ್ಲವಾದಲ್ಲಿ ಅಂತಹ ಅರ್ಜಿದಾರರು ಆನ್‌ಲೈನ್‌ನಲ್ಲಿ ಅರ್ಜಿಯನ್ನು ತುಂಬಿ ಮುಂದುವರೆಯಲು ಸಾಧ್ಯವಾಗುವುದಿಲ್ಲ. ಅರ್ಜಿದಾರ ನೀಡಿರುವ ವಿವರಗಳು ಎಲ್ಲಾ ರೀತಿಯಿಂದಲೂ ಸಮರ್ಪಕವಾಗಿದ್ದಲ್ಲಿ ಮಾತ್ರ ಚಲನ್ ಮುದ್ರಿಸಬಹುದು. ಚಲನ್ ಮುದ್ರಿಸಲು ಜನರೇಟ್ ಚಲನ್ ಬಟನ್ ಮೇಲೆ ಕ್ಲಿಕ್ ಮಾಡಿದಾಗ ತ್ರಿಪತಿ (Triplicate) ಬ್ಯಾಂಕ್ ಚಲನ್ ಸೃಜನೆಯಾಗುತ್ತದೆ. ಆ ಚಲನ್‌ನಲ್ಲಿ ಅರ್ಜಿಯ ಸಂಖ್ಯೆಯೊಂದಿಗೆ, ಆಯ್ಕೆ ಮಾಡಿರುವ ಘಟಕ, ನಿಮ್ಮ ಭಾವಚಿತ್ರ, ಪ್ರವರ್ಗ, ಮೀಸಲಾತಿಗಳ ವಿವರ ಮತ್ತು ಪಾವತಿಸಬೇಕಾಗಿರುವ ನಿಗದಿತ ಶುಲ್ಕಗಳ ವಿವರಗಳು ಇರುತ್ತವೆ. ಆ ಚಲನ್ ಪ್ರತಿಯನ್ನು ಮುದ್ರಿಸಿ/ಪ್ರಿಂಟ್ ಮಾಡಿಕೊಳ್ಳತಕ್ಕದ್ದು.

ನಂತರ ಅರ್ಜಿದಾರ ಮುದ್ರಿಸಿಕೊಳ್ಳಲಾದ ಚಲನ್‌ನಲ್ಲಿ ನಮೂದಾಗಿರುವ ಒಟ್ಟು ಪರೀಕ್ಷಾ ಶುಲ್ಕವನ್ನು ನಗದು ರೂಪದಲ್ಲಿಯೇ ಅಧಿಕೃತ ಎಸ್.ಬಿ.ಎಂ ಅಥವಾ ಎಸ್.ಬಿ.ಹೆಚ್ ಬ್ಯಾಂಕ್ ಶಾಖೆಗಳಲ್ಲಿ ಪಾವತಿಸಬೇಕು. ಶುಲ್ಕ ಪಾವತಿಸಿದ ನಂತರ ಚಲನ್‌ನ 'ಅಭ್ಯರ್ಥಿ ಪ್ರತಿ'ಯನ್ನು ಇಟ್ಟುಕೊಂಡಿರತಕ್ಕದು.

ಅಭ್ಯರ್ಥಿಯು ಶುಲ್ಕ ಪಾವತಿಸಿದ ಮರುದಿನ ಪುನಃ ಇಲಾಖೆಯ ಅಧಿಕೃತ ವೆಬ್‌ಸೈಟ್ www.ksp.gov.in ನಲ್ಲಿ My Application ನ್ನು ಕ್ಲಿಕ್ ಮಾಡಿ, ತಮ್ಮ ಅರ್ಜಿ ಸಂಖ್ಯೆ ಮತ್ತು ಜನ್ಮ ದಿನಾಂಕ ನಮೂದಿಸಿದ ನಂತರವೇ ಅರ್ಜಿ ತೆರೆಯುತ್ತದೆ ಹಾಗೂ ಅಭ್ಯರ್ಥಿಯು ಭರ್ತಿ ಮಾಡಿರುವ ಎಲ್ಲಾ ವಿವರಗಳನ್ನು ಒಳಗೊಂಡಂತೆ ಅರ್ಜಿಯು ಸೃಜನೆಯಾಗುತ್ತದೆ. ಸದರಿ ಅರ್ಜಿಯ ಪ್ರತಿಯನ್ನು ಪ್ರಿಂಟ್ ಮಾಡಿಟ್ಟುಕೊಳ್ಳತಕ್ಕದ್ದು. ಅರ್ಜಿ ಪ್ರತಿ ಮತ್ತು ಅರ್ಜಿ ಸಂಖ್ಯೆಯು ಮುಂದಿನ ನೇಮಕಾತಿ ಪ್ರಕ್ರಿಯೆಯ ಎಲ್ಲಾ ಹಂತಗಳಿಗೆ ಅವಶ್ಯಕವಾಗಿರುತ್ತದೆ.

- **ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ: 21.11.2016, ಬೆಳಿಗ್ಗೆ 10.00 ಗಂಟೆಯಿಂದ**
- **ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 14.12.2016, ಸಂಜೆ 06.00 ಗಂಟೆಯವರೆಗೆ**
- **ಅಧಿಕೃತ ಬ್ಯಾಂಕ್ ಶಾಖೆಗಳ ಕಛೇರಿ ವೇಳೆಯಲ್ಲಿ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 16.12.2016.**

<u>ಸೂಚನೆ:</u>

a) ಪೊಲೀಸ್ ಇಲಾಖೆಯ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಿ, ನಿಗದಿತ ದಿನಾಂಕದೊಳಗೆ ಸಲ್ಲಿಸಲಾಗುವ ಅರ್ಜಿಯನ್ನು ಮಾತ್ರ ಪರಿಗಣಿಸಲಾಗುವುದು.

b) ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line) 080–22943346 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು. ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಎದುರಾದಲ್ಲಿ ಅದನ್ನು ಸ್ಥಗಿತಗೊಳಿಸಿ ಮತ್ತೊಮ್ಮೆ ಅಧಿಕೃತ ವೆಬ್‌ಸೈಟ್‌ನಲ್ಲಿ ನೀಡಲಾಗಿರುವ ಅರ್ಜಿಯನ್ನು ಭರ್ತಿ ಮಾಡಲು ತಿಳಿಸಲಾಗಿದೆ.

**ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.**

| | |
|---|---|
| **ಬೆಂಗಳೂರು ಕೇಂದ್ರಸ್ಥಾನ ಮತ್ತು ರಾಜ್ಯದ ಇತರೆ ಜಿಲ್ಲೆಗಳಲ್ಲಿ ಖಾಲಿ ಇರುವ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ)** | 188 |
| **ಬೆಂಗಳೂರು ಕೇಂದ್ರಸ್ಥಾನ ಮತ್ತು ರಾಜ್ಯದ ಇತರೆ ಜಿಲ್ಲೆಗಳಲ್ಲಿ ಖಾಲಿ ಇರುವ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಮಹಿಳಾ)** | 21 |
| **ಹೈದ್ರಬಾದ್–ಕರ್ನಾಟಕ ರಾಜ್ಯ ಮಟ್ಟದ ಸ್ಥಳೀಯ ವೃಂದ (ಶೇಕಡ 8) ದಡಿ ಖಾಲಿ ಇರುವ ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ)** | 02 |
| **ಒಟ್ಟು** | **211** |

( ಮೇಲೆ ನಮೂದಿಸಿರುವ ಖಾಲಿ ಹುದ್ದೆಗಳ ವರ್ಗೀಕರಣಕ್ಕೆ ಅನುಬಂಧ–'ಅ' ಅನ್ನು ನೋಡಿ)

**4. <u>ಅರ್ಹತಾ ಷರತ್ತುಗಳು</u> :**

a) ಭಾರತೀಯ ನಾಗರಿಕನಾಗಿರತಕ್ಕದ್ದು.

b) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ, ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

c) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

**5. <u>ವಯೋಮಿತಿ</u> :**

ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 14.**12.2016**ಕ್ಕೆ ಅಭ್ಯರ್ಥಿಗೆ ಕನಿಷ್ಠ 19 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

a) **ಸಾಮಾನ್ಯ ಪುರುಷ ಮತ್ತು ಮಹಿಳಾ ಅಭ್ಯರ್ಥಿಗಳಿಗೆ:**

i) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 27 ವರ್ಷಗಳು.

ii) ಇತರೆ ಅಭ್ಯರ್ಥಿಗಳಿಗೆ 25 ವರ್ಷಗಳು.

iii) ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಅಭ್ಯರ್ಥಿಗಳಿಗೆ 30 ವರ್ಷಗಳು.

**ಟಿಪ್ಪಣಿ:**

**"ಬುಡಕಟ್ಟು ಜನಾಂಗ"** ಎಂದರೆ "ಉತ್ತರ ಕನ್ನಡ ಕಾರವಾರ, ದಕ್ಷಿಣ ಕನ್ನಡ ಮಂಗಳೂರು, ಉಡುಪಿ, ಚಿಕ್ಕಮಗಳೂರು, ಶಿವಮೊಗ್ಗ, ಕೊಡಗು, ಚಾಮರಾಜನಗರ ಮತ್ತು ಮೈಸೂರು ಅರಣ್ಯಗಳಲ್ಲಿ ಸಿದ್ದಿಗರು, ಜೇನುಕುರುಬ, ಕಾಡುಕುರುಬ, ಯೆರವ, ಸೋಲಿಗ, ಕುಡಿಯ, ಗೌಡ್ಲು, ಹಸಲರು, ಮಲೈಕುಡಿಯ ಮತ್ತು ಕೊರಗ ಬುಡಕಟ್ಟು ಸಮುದಾಯಗಳಿಗೆ ಸೇರಿದ ಅಭ್ಯರ್ಥಿಗಳು".

**b) ಮಾಜಿ ಸೈನಿಕ ಅಭ್ಯರ್ಥಿಗಳಿಗೆ :**

ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ವಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ" ಯ ಜೊತೆಗೆ ಹೆಚ್ಚುವರಿ 03 ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**c) ಮಾಜಿ ಸೈನಿಕರ ಬಗ್ಗೆ ವಿವರಣೆ:**

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂಸೇನೆ, ನೌಕಾಸೇನೆ ಮತ್ತು ವಾಯುಸೇನೆಯಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧರಲ್ಲದ ಹುದ್ದೆಗಳಲ್ಲಿ) ಸೇವೆ ಸಲ್ಲಿಸಿದ ವ್ಯಕ್ತಿ. ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್ (Defence Security Corps), ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್ (General Reserved Engineering Force), ಲೋಕ್ ಸಹಾಯಕ್ ಸೇನಾ (Lok Sahayak Sena) ಮತ್ತು ಪ್ಯಾರಾ ಮಿಲಿಟರಿ ದಳ (Para Military Forces) ದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು

(i) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ii) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(iii) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(iv) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:

ಅ) ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.

ಆ) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

ಇ) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**<u>ವಿವರಣೆ</u>**: ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರಿಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

v) ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರದಳದಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ಸಹಿಷ್ಣುತೆ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ **ದಿನಾಂಕ: 14.12.2016**ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**<u>ಟಿಪ್ಪಣಿ:</u>** ಮೇಲಿನ ಷರತ್ತಿನ ಪ್ರಕಾರ ಮಾಜಿ ಸೈನಿಕ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಯಮಾನುಸಾರ ಆ ಮೀಸಲಾತಿಗೆ ಅರ್ಹರೇ? ಎಂಬುದನ್ನು ಹತ್ತಿರದ ಜಿಲ್ಲಾ ಸೈನಿಕ ಬೋರ್ಡ್‌ನಿಂದ ತಿಳಿದುಕೊಂಡು ಮೀಸಲಾತಿಯನ್ನು ಕೋರುವುದು ಸೂಕ್ತ.

**6. <u>ವಿದ್ಯಾರ್ಹತೆ:</u>**

ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ ಮತ್ತು ಮಹಿಳಾ) ಹುದ್ದೆಗಳ ಆಯ್ಕೆಯ ಸಲುವಾಗಿ ಕಂಡಿಕೆ 1ರಲ್ಲಿ ನಮೂದಿಸಿರುವ ವೃಂದ ಮತ್ತು ನೇಮಕಾತಿ (ತಿದ್ದುಪಡಿ) ನಿಯಮಗಳನ್ವಯ ಅಭ್ಯರ್ಥಿಗಳು ಪಿ.ಯು.ಸಿ. ಅಥವಾ 12ನೇ ತರಗತಿಯಲ್ಲಿ ವಿಜ್ಞಾನದಲ್ಲಿ ಅಥವಾ ತತ್ಸಮಾನ ವಿದ್ಯಾರ್ಹತೆ (ಎಲೆಕ್ಟ್ರಾನಿಕ್ಸ್ ಅಥವಾ ಎಲೆಕ್ಟ್ರಿಕಲ್ಸ್ ಅಥವಾ ಫಿಜಿಕ್ಸ್ ಅಥವಾ ಕೆಮಿಸ್ಟ್ರಿ ಅಥವಾ ಮ್ಯಾತಮೆಟಿಕ್ಸ್ ಅಥವಾ ಕಂಪ್ಯೂಟರ್ ಸೈನ್ಸ್ ಅಥವಾ ಟೆಲಿಕಮ್ಯೂನಿಕೇಷನ್) ತೇರ್ಗಡೆಯಾಗಿರಬೇಕು.

ಮಾಜಿ ಸೈನಿಕ ಅಭ್ಯರ್ಥಿಗಳು ಸಹ ಮೇಲಿನ ವಿದ್ಯಾರ್ಹತೆಯನ್ನು ಹೊಂದಿರಬೇಕು.

**<u>ಟಿಪ್ಪಣಿ :</u>**

a) ಮೇಲೆ ನಮೂದಿಸಿದಂತೆ ವಿದ್ಯಾರ್ಹತೆಯನ್ನು ಹೊಂದದೇ ಇರುವ ಅಭ್ಯರ್ಥಿಗಳು ನೇಮಕಾತಿ ಪ್ರಕ್ರಿಯೆಯಲ್ಲಿ ಭಾಗವಹಿಸಿದ್ದರೆ ನಂತರ ನೇಮಕಾತಿ ಸಮಿತಿಗೆ ವಿದ್ಯಾರ್ಹತೆ / ಶೇಕಡ ಅಂಕಗಳನ್ನು ಹೊಂದಿರುವುದಿಲ್ಲವೆಂದು ಪತ್ತೆಯಾದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಯಾವುದೇ ಹಂತದಲ್ಲಾದರೂ ರದ್ದು ಪಡಿಸಲಾಗುವುದು.

b) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ನಿಗದಿತ ವಿದ್ಯಾರ್ಹತೆ ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತುಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ. ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:14.12.2016ರೊಳಗೆ ಎಲ್ಲಾ ಅಭ್ಯರ್ಥಿಗಳು ಪಿ.ಯು.ಸಿ. ಅಥವಾ 12ನೇ ತರಗತಿಯಲ್ಲಿ ವಿಜ್ಞಾನದಲ್ಲಿ ಅಥವಾ ತತ್ಸಮಾನ ವಿದ್ಯಾರ್ಹತೆ ಪರೀಕ್ಷೆಯ ಅಂಕಪಟ್ಟಿಯನ್ನು ಹೊಂದಿರಬೇಕು.

c) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಎಸ್‌ಸಿಆರ್ 84 ಬೆಂಗಳೂರು, ದಿನಾಂಕ:23.09.1985 ರನ್ವಯ 'ಸಿ' ವರ್ಗದ ಹುದ್ದೆಗಳಿಗೆ ಆಯ್ಕೆಯಾದ ಯಾವುದೇ ಅಭ್ಯರ್ಥಿಯು ಸರ್ಕಾರವು ವಿಶೇಷ ಅಥವಾ ಸಾಮಾನ್ಯ ಆದೇಶದಲ್ಲಿ ನಿಗದಿಪಡಿಸುವ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗದ ಹೊರತು ನೇಮಕ ಹೊಂದಲು ಅರ್ಹನಾಗುವುದಿಲ್ಲ. ಆದ್ದರಿಂದ ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಅಭ್ಯಸಿಸದಿದ್ದರೆ ಅಂತಹ ಅಭ್ಯರ್ಥಿಗಳು ನೇಮಕಾತಿ ಪ್ರಾಧಿಕಾರ ನಡೆಸುವ ಕನ್ನಡ ಭಾಷಾ ಪರೀಕ್ಷೆಯಲ್ಲಿ ಕಡ್ಡಾಯವಾಗಿ ಉತ್ತೀರ್ಣರಾಗತಕ್ಕದ್ದು.

**7. <u>ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ :</u>**

a) **<u>ತರಬೇತಿ:</u>**

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಡಿಜಿ ಮತ್ತು ಐಜಿಪಿ ರವರು ಕಾಲ ಕಾಲಕ್ಕೆ ನಿರ್ದಿಷ್ಟ ಪಡಿಸಿದ ಪೊಲೀಸ್ ತರಬೇತಿ ಶಾಲೆಗಳಲ್ಲಿ ಮೂಲ ತರಬೇತಿಯನ್ನು ಪಡೆಯಬೇಕು. ತರಬೇತಿಯಲ್ಲಿ ನಿಗದಿಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು. ಅನುತ್ತೀರ್ಣರಾದ ಅಭ್ಯರ್ಥಿಗಳನ್ನು ಸೇವೆಯಿಂದ ವಜಾಗೊಳಿಸಲಾಗುವುದು.

b) **<u>ಖಾಯಂಪೂರ್ವ ಅವಧಿ:</u>**

ನೇರ ನೇಮಕಾತಿ ಮೂಲಕ ಆಯ್ಕೆಗೊಂಡ ಅಭ್ಯರ್ಥಿಗಳು ಎರಡು ವರ್ಷ ಆರು ತಿಂಗಳು ಖಾಯಂ ಪೂರ್ವ ಅವಧಿಯಲ್ಲಿರುತ್ತಾರೆ.

c) <u>**ವೇತನ ಶ್ರೇಣಿ:**</u>

₹.11600-200-12000-250-13000-300-14200-350-15600-400-17200-450-19000-500-21000

d) <u>**ಪಿಂಚಣಿ ಸೌಲಭ್ಯ :**</u>

ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ:31.03.2006 ರಂತೆ ನೂತನ ಅಂಶದಾಯಿ ಪಿಂಚಣಿ ಸೌಲಭ್ಯ ಅನ್ವಯವಾಗುವುದು.

**8. <u>ಲಿಖಿತ ಪರೀಕ್ಷೆ:</u>**

a) **ಪರೀಕ್ಷೆಗಳ ದಿನಾಂಕವನ್ನು ಮುಂದೆ ಜಾಹೀರಾತು ಪಡಿಸಲಾಗುವುದು ಹಾಗೂ ಪೊಲೀಸ್ ಇಲಾಖೆಯ ವೆಬ್‌ಸೈಟ್ <u>http://www.ksp.gov.in</u> ನಲ್ಲಿ ಪ್ರಕಟಿಸಲಾಗುವುದು. ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೈಬ್‌ಸೈಟ್‌ನ್ನು ದಿನ ನಿತ್ಯ ನೋಡಲು ತಿಳಿಸಲಾಗಿದೆ.** ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯನ್ನು ಆಯ್ಕೆ ಸಮಿತಿಯು ನಿಗದಿಪಡಿಸುವ ಕೇಂದ್ರಗಳಲ್ಲಿ ಮಾತ್ರ ನಡೆಸಲಾಗುವುದು. ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ.

b) **ಆನ್‌ಲೈನ್ ಮುಖಾಂತರ ಮಾತ್ರ ಅರ್ಜಿ ಸಲ್ಲಿಸಿರುವುದರಿಂದ ಅಭ್ಯರ್ಥಿಗಳಿಗೆ ಲಿಖಿತ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಹೊಂದಿರುವ ಪ್ರವೇಶ ಕರೆ ಪತ್ರವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ನೀಡಲಾಗುವುದಿಲ್ಲ,** ಆದ್ದರಿಂದ ಲಿಖಿತ ಪರೀಕ್ಷೆಯ ಕರೆಪತ್ರವನ್ನು ಈ ಕಛೇರಿಯ ಅಧಿಕೃತ ವೆಬ್‌ಸೈಟ್ <u>www.ksp.gov.in</u> ನಿಂದ ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು (Download). ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ <u>www.ksp.gov.in</u> ನ್ನು ದಿನನಿತ್ಯ ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ಲಿಖಿತ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ. ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ಬರುವಾಗ, ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು

i) ಪಾಸ್‌ಪೋರ್ಟ್ (Passport)

ii) ಚಾಲನಾ ಪರವಾನಗಿ ಪತ್ರ (Driving License)

iii) ಪ್ಯಾನ್ ಕಾರ್ಡ್ (PAN Card)

iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)

vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)

vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Caste Certificate with Photo)

viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)

ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)

x) ಎಲೆಕ್ಟೋರಲ್ ಪೋಟೋ ಗುರುತಿನ ಚೀಟಿ (EPIC).

xi) ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್.(AADHAR CARD).

c) **ಲಿಖಿತ ಪರೀಕ್ಷೆಗೆ ತರಬೇಕಾದ ದಾಖಲೆಗಳು** i) ಲಿಖಿತ ಪರೀಕ್ಷೆಯ ಕರೆಪತ್ರ, ii) ಗುರುತಿನ ಚೀಟಿ, iii) ಆನ್‌ಲೈನ್ ಅರ್ಜಿಯ ಜೆರಾಕ್ಸ್ ಪ್ರತಿ ತರತಕ್ಕದ್ದು, ತಪ್ಪಿದ್ದಲ್ಲಿ ಲಿಖಿತ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ.

d) ಪೊಲೀಸ್ ಕಾನ್ಸ್‌ಟೇಬಲ್ (ವೈರ್‌ಲೆಸ್) (ಪುರುಷ ಮತ್ತು ಮಹಿಳಾ) ಹುದ್ದೆಗಳಿಗೆ ಸಂಬಂಧಿಸಿದಂತೆ ಕನ್ನಡ ಅಥವಾ ಆಂಗ್ಲ ಭಾಷೆಯಲ್ಲಿ 100 ಅಂಕಗಳಿಗೆ ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದಾಗಿದ್ದು, ಬಹುವಿಧ ಆಯ್ಕೆ (Multiple choice) ಉತ್ತರಗಳ ಲಿಖಿತ ಪರೀಕ್ಷೆ ಇರುತ್ತದೆ. ಸಾಮಾನ್ಯ ಜ್ಞಾನ, ವಿಜ್ಞಾನ, ಭೂಗೋಳ, ಇತಿಹಾಸ, ಭಾರತದ ಸಂವಿಧಾನ, ಭಾರತದ ಸ್ವಾತಂತ್ರ್ಯ ಸಂಗ್ರಾಮ, ಸಾಮಾನ್ಯ ಮಾನಸಿಕ ಸಾಮರ್ಥ್ಯ ಮತ್ತು ನೀತಿ ಶಿಕ್ಷಣ ಇತ್ಯಾದಿಗಳ ಬಗ್ಗೆ ಪ್ರಶ್ನೆಗಳು ಇರುತ್ತವೆ. ಪ್ರತಿ ಸರಿ ಉತ್ತರಕ್ಕೆ 1.00 ಅಂಕವನ್ನು ನೀಡಲಾಗುವುದು ಮತ್ತು ತಪ್ಪು ಉತ್ತರಕ್ಕೆ 0.25 ಅಂಕವನ್ನು ಕಳೆಯಲಾಗುವುದು. ಪರೀಕ್ಷೆಯ ಅವಧಿಯು ಒಂದೂವರೆ ಗಂಟೆಯದ್ದಾಗಿರುತ್ತದೆ.

e) **<u>ಸೂಚನೆ:</u>**

i) ಪ್ರಶ್ನೆ ಪತ್ರಿಕೆ ವಸ್ತುನಿಷ್ಠ (ಆಬ್ಜೆಕ್ಟೀವ್) ಮಾದರಿಯದಾಗಿರುತ್ತದೆ.

ii) ಪ್ರಶ್ನೆ ಪತ್ರಿಕೆಯ ಉತ್ತರಗಳನ್ನು ಓ.ಎಂ.ಆರ್ ಶೀಟ್‌ನಲ್ಲಿ **ಕಪ್ಪು/ನೀಲಿ** ಬಣ್ಣದ ಬಾಲ್‌ಪಾಯಿಂಟ್ ಪೆನ್ನಿನಿಂದ ಮಾತ್ರ ಗುರುತಿಸಬೇಕಾಗುತ್ತದೆ. ನಿಗದಿತ ಜಾಗದಲ್ಲಿ ಪ್ರಶ್ನೆ ಪತ್ರಿಕೆಯ ಶ್ರೇಣಿ (ಎ,ಬಿ,ಸಿ ಇತ್ಯಾದಿ) ಹಾಗೂ ಅಭ್ಯರ್ಥಿಯ ಅರ್ಜಿ ಸಂಖ್ಯೆ. ರೋಲ್ ನಂಬರ್ ಮತ್ತು ಸಹಿಯನ್ನು ತಪ್ಪದೇ ನಮೂದು ಮಾಡಬೇಕು. ಇದನ್ನು ತುಂಬದಿದ್ದರೆ ಉತ್ತರಗಳನ್ನು ಮೌಲ್ಯಮಾಪನ ಮಾಡಲಾಗುವುದಿಲ್ಲ ಹಾಗೂ ಅಭ್ಯರ್ಥಿ ಆಯ್ಕೆಗೆ ಅನರ್ಹನಾಗುತ್ತಾರೆ. ಆದ್ದರಿಂದ ಅಭ್ಯರ್ಥಿಯು ಸರಿಯಾಗಿ ಮೇಲಿನ ಮಾಹಿತಿ/ವಿವರಗಳನ್ನು ಕಡ್ಡಾಯವಾಗಿ ಗುರುತಿಸಬೇಕು.

iii) ಅಭ್ಯರ್ಥಿಗಳು ಅರ್ಜಿ ಸಂಖ್ಯೆ. ರೋಲ್ ನಂಬರ್ ಇತ್ಯಾದಿ ಭರ್ತಿ ಮಾಡಿದ ನಂತರ ನಿಗದಿತ ಜಾಗದಲ್ಲಿ ತಪ್ಪದೇ ಸಹಿ ಮಾಡಬೇಕು ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು.

iv) ಅರ್ಜಿ ಸಂಖ್ಯೆ, ರೋಲ್ ನಂಬರ್ ಪ್ರಶ್ನೆ ಪತ್ರಿಕೆ ಶ್ರೇಣಿ ಇತ್ಯಾದಿಗಳನ್ನು ಒ.ಎಂ.ಆರ್ ಉತ್ತರ ಪತ್ರಿಕೆಯಲ್ಲಿ ಭರ್ತಿ ಮಾಡದೆ ಪರೀಕ್ಷೆ ಮುಗಿದ ನಂತರ ಅದನ್ನು ಪರಿಗಣಿಸುವಂತೆ ಕೋರಿದಲ್ಲಿ ಅಂತಹ ಮನವಿಗಳನ್ನು ಪರಿಗಣಿಸಲಾಗುವುದಿಲ್ಲ.

v) ಅಭ್ಯರ್ಥಿಗಳು ಲಿಖಿತ ಪರೀಕ್ಷೆಗೆ ನಿಗದಿಪಡಿಸಿರುವ ಸಮಯಕ್ಕಿಂತ 90 ನಿಮಿಷಗಳ ಮುಂಚಿತವಾಗಿ ಪರೀಕ್ಷಾ ಕೊಠಡಿಯಲ್ಲಿ ಹಾಜರಿರತಕ್ಕದ್ದು, ಆ ಸಮಯದಲ್ಲಿ ಪರೀಕ್ಷಾ ಮೇಲ್ವಿಚಾರಕರು ಉತ್ತರ ಪತ್ರಿಕೆಯಲ್ಲಿ ಅರ್ಜಿ ಸಂಖ್ಯೆ, ನೊಂದಣಿ ಸಂಖ್ಯೆ, ಪ್ರಶ್ನೆ ಪತ್ರಿಕೆ ಶ್ರೇಣಿ, ಸಹಿ, ಎಡಗೈ ಹೆಬ್ಬೆಟ್ಟಿನ ಭರ್ತಿ/ಗುರುತು ಮಾಡುವ ಬಗ್ಗೆ ಕೆಲವು ಮಾರ್ಗ ಸೂಚನೆಗಳನ್ನು ನೀಡುವರು.

vi) ನೇಮಕಾತಿ ಸಮಿತಿಯು ನಡೆಸುವ ಯಾವುದೇ ಪರೀಕ್ಷೆಗಳಲ್ಲಿ ಅನುಚಿತವಾಗಿ ವರ್ತಿಸಿದರೆ, ಅಥವಾ ನಕಲು ಮಾಡಿದ್ದು ಕಂಡು ಬಂದರೆ ಅಥವಾ ನಕಲು ಮಾಡುವ ಸಾಮಗ್ರಿಯನ್ನು ಹೊಂದಿದ್ದರೆ, ಅಂತಹ ಅಭ್ಯರ್ಥಿಗಳನ್ನು 3 ವರ್ಷಗಳ ಕಾಲ ಡಿಬಾರ್ ಮಾಡಲಾಗುವುದು.

vii) ಪರೀಕ್ಷಾ ಕೇಂದ್ರದಲ್ಲಿ ಮೊಬೈಲ್ ಫೋನುಗಳನ್ನು ನಿಷೇಧಿಸಲಾಗಿದೆ. ಪರೀಕ್ಷೆ ಬರೆಯುವಾಗ ಮೊಬೈಲ್ ಫೋನುಗಳನ್ನು ಅಭ್ಯರ್ಥಿಗಳು ಹೊಂದಿದ್ದರೆ ಅವರನ್ನು ಅನರ್ಹಗೊಳಿಸಲಾಗುತ್ತದೆ.

viii) ಎಲೆಕ್ಟ್ರಾನಿಕ್ ಸಾಮಗ್ರಿಗಳಾದ ಕ್ಯಾಲ್ಕುಲೇಟರ್ ಇತ್ಯಾದಿಗಳನ್ನು ಪರೀಕ್ಷಾ ಕೊಠಡಿಗೆ ತೆಗೆದುಕೊಂಡು ಹೋಗುವುದನ್ನು ನಿಷೇದಿಸಲಾಗಿದೆ.

ix) ಪ್ರಶ್ನೆ ಪತ್ರಿಕೆಯಲ್ಲಿನ ಯಾವುದಾದರು ಪ್ರಶ್ನೆಯ ಬಗ್ಗೆ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಆಯಾ ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅವರ ಹೆಸರು, ವಿಳಾಸ, ನೋಂದಣಿ ಸಂಖ್ಯೆ. ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ನೇಮಕಾತಿ ಸಮಿತಿಗೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ. ಪ್ರಶ್ನೆ ಪತ್ರಿಕೆಯಲ್ಲಿ ಯಾವುದೇ ದೋಷ ಕಂಡು ಬಂದಲ್ಲಿ ಅದನ್ನು ತಕ್ಷಣ ಮೇಲ್ವಿಚಾರಕರ ಗಮನಕ್ಕೆ ತಂದು ಅದನ್ನು ಸರಿಪಡಿಸಿಕೊಳ್ಳಬೇಕು. ಪರೀಕ್ಷೆ ಮುಗಿದ ನಂತರ ಅದರ ಬಗ್ಗೆ ನೇಮಕಾತಿ ಸಮಿತಿಯ ಗಮನಕ್ಕೆ ತಂದರೆ ಅಂತಹ ಆಕ್ಷೇಪಣೆಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

f) ಅಭ್ಯರ್ಥಿಗಳು ವಸ್ತುನಿಷ್ಠ ಲಿಖಿತ ಪರೀಕ್ಷೆಯಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅರ್ಹತಾ ಪಟ್ಟಿಯನ್ನು ತಯಾರಿಸಲಾಗುವುದು. ಈ ಅರ್ಹತಾ ಪಟ್ಟಿಯಿಂದ ಪ್ರತಿ ವರ್ಗದಲ್ಲಿ ಅಧಿಸೂಚಿತ ಖಾಲಿ ಇರುವ ಹುದ್ದೆಗಳಿಗೆ ಮೆರಿಟ್ ಹಾಗೂ ಮೀಸಲಾತಿ ಅನುಗುಣವಾಗಿ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳಿಗೆ 1:5 ರ ಅನುಪಾತದಲ್ಲಿ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ತಯಾರಿಸಲಾಗುವುದು.

1:5 ರ ಅನುಪಾತದಂತೆ ಆಯ್ಕೆಯಾಗಿರುವ ಅಭ್ಯರ್ಥಿಗಳು ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳಲ್ಲಿ ಅರ್ಹರಾಗದಿದ್ದಲ್ಲಿ ಮುಂದಿನ 1:5 ರ ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗಳಿಗೆ ಕರೆಯಲಾಗುವುದು. ಈ ಅನುಪಾತವು ಯಾವುದೇ ಕಾರಣಕ್ಕೂ 1:10ರ ಅನುಪಾತವನ್ನು ಮೀರುವುದಿಲ್ಲ.

**9) <u>ಲಿಖಿತ ಪರೀಕ್ಷೆಯಲ್ಲಿ 1:5ರ ಅನುಪಾತದಡಿ ಅರ್ಹಗೊಂಡ ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಪರೀಕ್ಷೆ (Physical Standard Test) ಮತ್ತು ಸಹಿಷ್ಣುತೆ ಪರೀಕ್ಷೆ (Endurance Test) ಗಳನ್ನು ನಡೆಸಲಾಗುವುದು:</u>**

**ಪರೀಕ್ಷೆಗಳ ದಿನಾಂಕವನ್ನು ಪೊಲೀಸ್ ಇಲಾಖೆಯ ವೆಬ್‌ಸೈಟ್ "http://www.ksp.gov.in" ನಲ್ಲಿ ಪ್ರಕಟಿಸಲಾಗುವುದು. ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಹೊಂದಿರುವ ಪ್ರವೇಶ/ಕರೆ ಪತ್ರಗಳನ್ನು ಪೊಲೀಸ್ ಇಲಾಖೆಯ ಅಂತರ್ಜಾಲದಿಂದ ಅಭ್ಯರ್ಥಿಗಳು ಕಡ್ಡಾಯವಾಗಿ ಡೌನ್ ಲೋಡ್ ಮಾಡಿಕೊಳ್ಳಬೇಕು. ಅಭ್ಯರ್ಥಿಗಳಿಗೆ ಪ್ರವೇಶ ಪತ್ರಗಳನ್ನು ಪ್ರತ್ಯೇಕವಾಗಿ ರವಾನಿಸಲಾಗುವುದಿಲ್ಲ. ಪ್ರವೇಶ ಪತ್ರವಿಲ್ಲದೇ ಪಿ.ಎಸ್.ಟಿ. ಮತ್ತು ಇ.ಟಿ. ಪರೀಕ್ಷೆಗಳಿಗೆ ಅನುವು ಮಾಡಲಾಗುವುದಿಲ್ಲ. ಈ ಸಂಬಂಧ ಅಭ್ಯರ್ಥಿಗಳು ಮುಖ್ಯವಾಗಿ ಈ ಕಛೇರಿಯ ಅಧಿಕೃತ ವೆಬ್‌ಸೈಟ್ <u>www.ksp.gov.in</u> ನ್ನು ಮೇಲಿಂದ ಮೇಲೆ ಗಮನಿಸುತ್ತಿರುವುದು ಸೂಕ್ತ.**

a) ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಮತ್ತು ಸಹಿಷ್ಣುತೆ ಪರೀಕ್ಷೆಗಳನ್ನು ಸಂಬಂಧಪಟ್ಟ ಘಟಕಾಧಿಕಾರಿ ನಿಗದಿಪಡಿಸಿದ ಸ್ಥಳದಲ್ಲಿ ನಡೆಸಲಾಗುವುದು. ಆಯ್ಕೆ ಸಮಿತಿಯು ಯಾವುದೇ ಪರೀಕ್ಷಾ ಕೇಂದ್ರವನ್ನು ರದ್ದುಪಡಿಸುವ ಅಥವಾ ಹೊಸದಾಗಿ ಸೇರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತದೆ. ಆದ್ದರಿಂದ ಅಭ್ಯರ್ಥಿಗಳು ಇಲಾಖೆಯ ವೈಬ್‌ಸೈಟ್‌ನ್ನು ದಿನ ನಿತ್ಯ ನೋಡಲು ತಿಳಿಸಲಾಗಿದೆ.

b) ದೈಹಿಕ ಪರೀಕ್ಷೆಯು ನಡೆಯುವ ವೇಳೆ ಮತ್ತು ಸ್ಥಳವನ್ನು ಸಂಬಂಧಪಟ್ಟ ದೈಹಿಕ ಪರೀಕ್ಷೆಯ ಕೇಂದ್ರಗಳ ಸೂಚನಾ ಫಲಕದಲ್ಲಿಯೂ ಸಹ ಪ್ರಕಟಿಸಲಾಗುವುದು. ಕರೆಪತ್ರವನ್ನು ಪಡೆಯದೆ ಪರೀಕ್ಷೆಗೆ ಹಾಜರಾದಲ್ಲಿ ಅಂತಹವರಿಗೆ ದೈಹಿಕ ಪರೀಕ್ಷೆಗೆ ಅವಕಾಶ ನೀಡಲಾಗುವುದಿಲ್ಲ.

ದೈಹಿಕ ಪರೀಕ್ಷೆಗೆ ಬರುವಾಗ ಕರೆಪತ್ರದ ಜೊತೆಗೆ ಈ ಕೆಳಕಂಡ ಯಾವುದಾದರೊಂದು ಗುರುತಿನ ಚೀಟಿಯನ್ನು ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

i) ಪಾಸ್‌ಪೋರ್ಟ್ (Passport)

ii) ಚಾಲನಾ ಪರವಾನಗಿ ಪತ್ರ (Driving License)

iii) ಪ್ಯಾನ್ ಕಾರ್ಡ್ (PAN Card)

iv) ರಾಜ್ಯ ಸರ್ಕಾರ/ ಕೇಂದ್ರ ಸರ್ಕಾರ / ಸಾರ್ವಜನಿಕ ಸ್ವಾಮ್ಯದ ಅಥವಾ ಸರ್ಕಾರದ ಅಧೀನಕ್ಕೊಳಪಟ್ಟ ಖಾಸಗೀ ಕಂಪನಿಗಳು ವಿತರಿಸಿರುವ ಭಾವಚಿತ್ರವಿರುವ ಸೇವಾ ಗುರುತಿನ ಚೀಟಿ (Service ID Card)

v) ಸಾರ್ವಜನಿಕ ಬ್ಯಾಂಕುಗಳು / ಅಂಚೆ ಕಛೇರಿಗಳು ವಿತರಿಸಿರುವ ಭಾವಚಿತ್ರವಿರುವ ಪಾಸ್ ಪುಸ್ತಕ (Bank Pass Book with Photograph)

vi) ಭಾವಚಿತ್ರ ಸಮೇತ ನೋಂದಣಿಯಾಗಿರುವ ಸ್ವತ್ತಿನ ದಾಖಲೆಪತ್ರ ಅಥವಾ ಪಟ್ಟಾ ಪುಸ್ತಕ (Pattas and registered deeds with Photograph)

vii) ಭಾವಚಿತ್ರ ಸಮೇತ ಸಂಬಂಧಪಟ್ಟ ಪ್ರಾಧಿಕಾರಿಯವರು ವಿತರಿಸಿರುವ ಜಾತಿ ಪ್ರಮಾಣ ಪತ್ರ (Caste Certificate with Photo)

viii) ಮಾಜಿ ಸೈನಿಕ ಅಭ್ಯರ್ಥಿಗಳಿಗೆ ವಿತರಿಸಿರುವ ಪಿಂಚಣಿ ಪುಸ್ತಕ / ಪಿಂಚಣಿ ಮಂಜೂರಾತಿ ಆಗಿರುವ ಆದೇಶ (Ex-servicemen's pension book/pension payment order)

ix) ಎನ್.ಆರ್.ಇ.ಜಿ.ಎಸ್.ಯಿಂದ ನೀಡಿದ ಭಾವಚಿತ್ರವಿರುವ ಉದ್ಯೋಗ ಚೀಟಿ. (Job cards with Photograph)

x) ಎಲೆಕ್ಟೋರಲ್ ಫೋಟೋ ಗುರುತಿನ ಚೀಟಿ (EPIC).

ಭಾರತೀಯ ಗುರುತು ಪ್ರಾಧಿಕಾರದಿಂದ ನೀಡಲಾಗಿರುವ ಆಧಾರ್ ಕಾರ್ಡ್.(AADHAR CARD).

c) ಕರೆಪತ್ರದ ಜೊತೆಗೆ ಆನ್‌ಲೈನ್ ಮುಖಾಂತರ ಸಲ್ಲಿಸಿದ ಅರ್ಜಿಯ ಜೆರಾಕ್ಸ್ ಪ್ರತಿಯನ್ನು ಸಹ ತರತಕ್ಕದ್ದು, ತಪ್ಪಿದ್ದಲ್ಲಿ ಪರೀಕ್ಷೆಗೆ ಹಾಜರಾಗಲು ಅನುಮತಿ ನೀಡಲಾಗುವುದಿಲ್ಲ. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಅಂತಹವರನ್ನು ಅನರ್ಹ ಗೊಳಿಸಲಾಗುವುದು ಹಾಗೂ ಬದಲಿ ದಿನಾಂಕವನ್ನು ನೀಡಲಾಗುವುದಿಲ್ಲ.

d) **ದೇಹದಾರ್ಢ್ಯತೆ ಪರೀಕ್ಷೆ (Physical Standard Test):**

| | |
|---|---|
| ಎಲ್ಲಾ ಸಾಮಾನ್ಯ ಮತ್ತು * ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ***ಕನಿಷ್ಠ ಎತ್ತರ*** : 168 ಸೆಂ. ಮೀ.<br>***ಕನಿಷ್ಠ ಎದೆ ಸುತ್ತಳತೆ*** : 86 ಸೆಂ. ಮೀ (ಪೂರ್ತಿ ವಿಸ್ತರಿಸಿದಾಗ) ಕನಿಷ್ಟ ವಿಸ್ತರಣೆ 5 ಸೆಂ. ಮೀ. |
| ಮಹಿಳಾ ಅಭ್ಯರ್ಥಿಗಳಿಗೆ | ***ಕನಿಷ್ಠ ಎತ್ತರ*** : 157 ಸೆಂ. ಮೀ. ***ಕನಿಷ್ಠ ತೂಕ*** : 45 ಕೆ.ಜಿ. |

| | |
|---|---|
| ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಪುರುಷ ಅಭ್ಯರ್ಥಿಗಳಿಗೆ | ***ಕನಿಷ್ಠ ಎತ್ತರ*** : 155 ಸೆಂ. ಮೀ.<br>***ಎದೆ ಸುತ್ತಳತೆ*** : 5 ಸೆಂ.ಮೀ.ಗಳ ಕನಿಷ್ಠ ವಿಸ್ತರಿಸುವುದರೊಂದಿಗೆ ಸಂಪೂರ್ಣವಾಗಿ ಹಿಗ್ಗಿಸಿದಾಗ 75 ಸೆಂ.ಮೀ.ಗಳಿಗಿಂತ ಕಡಿಮೆ ಇಲ್ಲದಂತೆ. |
| ಕರ್ನಾಟಕ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿರುವ ಬುಡಕಟ್ಟು ಮಹಿಳಾ ಅಭ್ಯರ್ಥಿಗಳಿಗೆ | ***ಕನಿಷ್ಠ ಎತ್ತರ*** : 150 ಸೆಂ. ಮೀ. |

e) **ಸಹಿಷ್ಣುತೆ ಪರೀಕ್ಷೆ : (Endurance Test)**

i) ಮೇಲಿನ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾದ ಅಭ್ಯರ್ಥಿಗಳು ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಹಾಗೂ ಈ ಕೆಳಗಿನ ಎಲ್ಲಾ ಸಹಿಷ್ಣುತೆ ಪರೀಕ್ಷೆಗಳನ್ನು ಈ ಕೆಳಗೆ ನಮೂದಿಸಿರುವ ಕ್ರಮದಲ್ಲಿಯೇ ಭಾಗವಹಿಸುವುದು ಕಡ್ಡಾಯವಾಗಿರುತ್ತದೆ. ಈ ಪರೀಕ್ಷೆಗಳಲ್ಲಿ ಭಾಗವಹಿಸುವುದನ್ನು ತಿರಸ್ಕರಿಸುವವರು/ ವಿಫಲವಾಗುವವರು ಅನರ್ಹತೆಗೆ ಒಳಗಾಗುವರು. ಪ್ರತಿಯೊಂದು ಸಹಿಷ್ಣುತೆ ಪರೀಕ್ಷೆ ಮುಗಿದ ನಂತರ ನಿಗದಿತ ನಮೂನೆಗೆ ಅಭ್ಯರ್ಥಿಯು ಭರ್ತಿ ಮಾಡಿರುವ ವಿವರಗಳನ್ನು ಪರಿಶೀಲಿಸಿ ಸಹಿ ಹಾಕಬೇಕು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಯು ಅನರ್ಹತೆಗೊಳಗಾಗುವನು. ಸಹಿಷ್ಣುತೆ ಪರೀಕ್ಷೆಗೆ ಅಂಕಗಳನ್ನು ನೀಡಲಾಗುವುದಿಲ್ಲ. ಇವು ಕೇವಲ ಅರ್ಹತೆಗೆ ಮಾತ್ರ ಸೀಮಿತವಾಗಿರುತ್ತದೆ.

**ii) <u>ಸಹಿಷ್ಣುತೆ ಪರೀಕ್ಷೆಯಲ್ಲಿರುವ ಅಂಶಗಳು ಹಾಗೂ ಅರ್ಹತಾ ವೇಳೆ/ ದೂರದ ವಿವರಗಳು ಈ ಕೆಳಕಂಡಂತಿರುತ್ತದೆ ಮತ್ತು ಅವುಗಳನ್ನು ನಮೂದಿಸಲಾಗಿರುವ ಕ್ರಮದಲ್ಲಿಯೇ ನಡೆಸಲಾಗುವುದು:</u>**

| ಸಹಿಷ್ಣುತೆ ಪರೀಕ್ಷೆ | | |
|---|---|---|
| | **ಅಂಶಗಳು** | **ಅರ್ಹತಾ ವೇಳೆ / ದೂರ** |
| ಎಲ್ಲಾ ಸಾಮಾನ್ಯ ಪುರುಷ ಅಭ್ಯರ್ಥಿಗಳಿಗೆ | 1600 ಮೀಟರ್ ಓಟ | 6 ನಿಮಿಷ 30 ಸೆಕೆಂಡ್ |
| | ಎತ್ತರ ಜಿಗಿತ<br><u>ಅಥವಾ</u><br>ಉದ್ದ ಜಿಗಿತ | 1.20 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br><u>ಅಥವಾ</u><br>3.80 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (7.26 ಕೆ.ಜಿ.) | 5.60 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| ಮಹಿಳಾ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | 400 ಮೀಟರ್ ಓಟ | 2 ನಿಮಿಷಕ್ಕಿಂತ ಮೀರದಂತೆ |
| | ಎತ್ತರ ಜಿಗಿತ<br><u>ಅಥವಾ</u><br>ಉದ್ದ ಜಿಗಿತ | 0.90 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br><u>ಅಥವಾ</u><br>2.50 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |
| | ಗುಂಡು ಎಸೆತ (4 ಕೆ.ಜಿ.) | 3.75 ಮೀಟರ್‌ಗಿಂತ ಕಡಿಮೆ ಇಲ್ಲದಂತೆ<br>(3 ಅವಕಾಶಗಳು ಮಾತ್ರ) |

**<u>ವಿಶೇಷ ಸೂಚನೆ :-</u>**

**ಸಹಿಷ್ಣುತೆ ಪರೀಕ್ಷೆಗೆ ಹಾಜರಾಗುವ ಮುನ್ನ ಅಭ್ಯರ್ಥಿಗಳು ದೈಹಿಕವಾಗಿ ಸದೃಢರಿರಬೇಕು. ಈ ಪರೀಕ್ಷೆಗಳ ಸಂದರ್ಭದಲ್ಲಿ ಸಂಭವಿಸುವ ಯಾವುದೇ ರೀತಿಯ ಅನಾಹುತ / ತೊಂದರೆಗಳಿಗೆ ಪೊಲೀಸ್ ಇಲಾಖೆ/ ನೇಮಕಾತಿ ಸಮಿತಿಯು ಜವಾಬ್ದಾರರಾಗಿರುವುದಿಲ್ಲ. ಅಭ್ಯರ್ಥಿಗಳು ಅವರ ಸ್ವಂತ ಹಿತ ದೃಷ್ಟಿಯಿಂದ ಅವರ ದೇಹದ ವೈದ್ಯಕೀಯ ಪರೀಕ್ಷೆಯನ್ನು ಮಾಡಿಸಿಕೊಂಡು, ಅಭ್ಯರ್ಥಿಯ ಆರೋಗ್ಯವು ಎಲ್ಲ ರೀತಿಯಿಂದಲೂ ಸದೃಢವಾಗಿದೆ ಎಂದು ಖಚಿತ ಪಡಿಸಿಕೊಂಡು ಇಲಾಖೆ ನಡೆಸುವ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಗೆ ಎಲ್ಲ ವಿಧದಿಂದಲೂ ಅರ್ಹನೆಂದು ಮುಂಚಿತವಾಗಿಯೇ ತಿಳಿದುಕೊಂಡು ಹಾಜರಾಗತಕ್ಕದ್ದು. ಈ ದಿಸೆಯಲ್ಲಿ ಕನಿಷ್ಠ ಒಂದು ತಿಂಗಳ ಮುಂಚೆಯಿಂದಲೇ ಸಹಿಷ್ಣುತೆ ಪರೀಕ್ಷೆಗೆ ಅಭ್ಯರ್ಥಿಗಳು ಸಾಕಷ್ಟು ಅಭ್ಯಾಸ ಮಾಡಿಕೊಳ್ಳತಕ್ಕದ್ದು. ಸಹಿಷ್ಣುತೆ ಪರೀಕ್ಷೆಯಲ್ಲಿ ಯಾವ ಅನಾಹುತಗಳಿಗೂ ಇಲಾಖೆ ಜವಾಬ್ದಾರರಾಗುವುದಿಲ್ಲ. ಈ ಪರೀಕ್ಷೆಗಳು ಅಭ್ಯರ್ಥಿಗಳು ತನ್ನ ಸ್ವಂತ ಜವಾಬ್ದಾರಿ ಹಾಗೂ ಸ್ವಇಚ್ಛೆಯಿಂದ ಭಾಗವಹಿಸುವುದು.**

**<u>ಟಿಪ್ಪಣಿ :</u>**

i) ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ಒಂದು ದೈಹಿಕ ಪರೀಕ್ಷೆಯ ಸಮಿತಿಯು ನಡೆಸುತ್ತದೆ. ಯಾವುದೇ ವೈದ್ಯಕೀಯ ಪ್ರಮಾಣ ಪತ್ರದ ಆಧಾರದ ಮೇಲೆ ಪರಿಗಣಿಸಲಾಗುವುದಿಲ್ಲ. ದೈಹಿಕ ಪರೀಕ್ಷೆಯ ಸಮಿತಿಯು ನೀಡುವ ಫಲಿತಾಂಶವೇ ಅಂತಿಮವಾಗಿರುತ್ತದೆ.

ii) ಸಹಿಷ್ಣತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆ ಪೂರ್ಣಗೊಂಡ ನಂತರ ಅಭ್ಯರ್ಥಿಗಳು ದೈಹಿಕ ಪರೀಕ್ಷೆ ಸಮಿತಿ ಸಮ್ಮುಖದಲ್ಲಿ ನಿಗದಿತ ನಮೂನೆಗೆ ಸಹಿ ಮತ್ತು ಎಡಗೈ ಹೆಬ್ಬೆಟ್ಟಿನ ಗುರುತು ಹಾಕಬೇಕು. ಇಲ್ಲವಾದರೆ ಅಂತಹವರನ್ನು ಅನರ್ಹರೆಂದು ಪರಿಗಣಿಸಲಾಗುವುದು.

iii) ಅಭ್ಯರ್ಥಿಗಳು ಸಹಿಷ್ಣುತೆ ಪರೀಕ್ಷೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹಗೊಂಡಲ್ಲಿ ಮಾತ್ರ ವೈದ್ಯಕೀಯ ಪರೀಕ್ಷೆಗೆ ಅರ್ಹಗೊಳ್ಳುವರು.

iv) ನಿಗದಿಪಡಿಸಿರುವ ಕನಿಷ್ಠ ಎತ್ತರ 168 ಸೆಂ.ಮೀ. ಹೊಂದಿರುವ ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಿಲ್ಲದೆ ಇರುವ ಪಕ್ಷದಲ್ಲಿ ಕಡಿಮೆ ಎತ್ತರ ಹೊಂದಿರುವ ಮಾಜಿ ಸೈನಿಕ ಅಭ್ಯರ್ಥಿಗಳನ್ನು ಸಹ ಅರ್ಹತೆಗೆ ಅನುಗುಣವಾಗಿ ಅಂತಿಮ ಆಯ್ಕೆಗೆ ಪರಿಗಣಿಸಲಾಗುವುದು. ಕಡಿಮೆ ಎತ್ತರ ಹೊಂದಿರುವ ಅಭ್ಯರ್ಥಿಗಳು ಹೆಚ್ಚಿನ ಅಂಕಗಳನ್ನು ಪಡೆದಿದ್ದರೂ ಮೊದಲು ಕನಿಷ್ಠ ಎತ್ತರ ಹೊಂದಿರುವ ಮಾಜಿ ಸೈನಿಕ ಅಭ್ಯರ್ಥಿಗಳನ್ನು ಪರಿಗಣಿಸಿದ ನಂತರ ಕಡಿಮೆ ಎತ್ತರ ಹೊಂದಿರುವ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ಪರಿಗಣಿಸಲಾಗುವುದು.

v) ದೇಹದಾರ್ಢ್ಯತೆ ಪರೀಕ್ಷೆಯ ಎತ್ತರ ಹಾಗೂ ತೂಕವನ್ನು BMI (Body Mass Index Machine) ಯಂತ್ರದಿಂದ ಅಥವಾ ಲಭ್ಯವಿರುವ ಗುಣಮಟ್ಟ ಯಂತ್ರದಿಂದ ಪಡೆಯಲಾಗುವುದು.

vi) ಪಾರದರ್ಶಕತೆಗಾಗಿ ಮೇಲೆ ಹೇಳಿದ ಎಲ್ಲಾ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯನ್ನು ವೀಡಿಯೋಗ್ರಾಫಿ ಅಥವಾ ಸಿಸಿ ಟಿವಿ ಮೂಲಕ ಸೆರೆಹಿಡಿಯಲಾಗುವುದು.

vii) ಈ ಮೇಲ್ಕಂಡ ಸಹಿಷ್ಣುತೆ ಮತ್ತು ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಅರ್ಹರಾಗುವ ಅಭ್ಯರ್ಥಿಗಳಲ್ಲಿ ಅಧಿಸೂಚಿಸಲಾದ ಹುದ್ದೆಗಳನುಸಾರ ಮೆರಿಟ್ ಹಾಗೂ ಮೀಸಲಾತಿಗನುಗುಣವಾಗಿ 1:1ರ ಅನುಪಾತದಲ್ಲಿ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಲಾಗುವುದು.

**10. <u>ವೈದ್ಯಕೀಯ ಪರೀಕ್ಷೆ</u> :**

ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ ನಂತರ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಅರ್ಹಗೊಳ್ಳುವ ಎಲ್ಲಾ ಅಭ್ಯರ್ಥಿಗಳು ವೈದ್ಯಕೀಯ ಮಂಡಳಿಯ ಮುಂದೆ ವೈದ್ಯಕೀಯ ಪರೀಕ್ಷೆಗೆ ಹಾಜರಾಗತಕ್ಕದ್ದು, ವೇಳೆ ಮತ್ತು ಸ್ಥಳವನ್ನು ನೇಮಕಾತಿ ಪ್ರಾಧಿಕಾರವು ನಿಗದಿಪಡಿಸುವುದು.

ಆಯ್ಕೆಯಾದ ಅಭ್ಯರ್ಥಿಗಳು ವೈದ್ಯಕೀಯ ಪರೀಕ್ಷೆಗೆ ಹಾಜರಾಗುವಾಗ ಮೂಲ ದಾಖಲೆಗಳೊಂದಿಗೆ (ಎಸ್‌ಎಸ್‌ಎಲ್‌ಸಿ ಅಥವಾ 10ನೇ ತರಗತಿಯ ವಿದ್ಯಾರ್ಹತೆ ಪ್ರಮಾಣ ಪತ್ರ, ಪಿಯುಸಿ ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರ, ಜಾತಿ ಪ್ರಮಾಣ ಪತ್ರ, ಸಮತಳ ಮೀಸಲಾತಿ ಕೋರಿದ್ದಲ್ಲಿ ಅವುಗಳ ಪ್ರಮಾಣ ಪತ್ರಗಳು) ಹಾಜರಾಗುವುದು ಹಾಗೂ ಪತ್ರಾಂಕಿತ (Gazetted) ಅಧಿಕಾರಿಯವರಿಂದ ದೃಢೀಕರಿಸಿದ ಮೂಲ ದಾಖಲೆಗಳ ಜೆರಾಕ್ಸ್ ಪ್ರತಿಯ ಒಂದು ಸೆಟ್‌ಅನ್ನು ಸಂಬಂಧಪಟ್ಟ ಕಛೇರಿಗೆ ನೀಡುವುದು.

ವೈದ್ಯಕೀಯ ಪರೀಕ್ಷೆಗಳು ಈ ಕೆಳಕಂಡಂತಿರುತ್ತವೆ :

a) **<u>ದೃಷ್ಟಿ:</u>**

ಕನ್ನಡಕ ಸಹಿತ ಅಥವಾ ಕನ್ನಡಕವಿಲ್ಲದೇ ಕೆಳಗೆ ಕಾಣಿಸಿದ ದರ್ಜೆಯ ಸಮೀಪ ಮತ್ತು ದೂರದ ದೃಷ್ಟಿ ಹೊಂದಿರಬೇಕು.

| | <u>ಉತ್ತಮ</u> | | <u>ಕನಿಷ್ಟ</u> |
|---|---|---|---|
| (i) ದೂರದ ದೃಷ್ಟಿ | 6/9 | ಅಥವಾ | 6/9 |
| | 6/9 | | 6/12 |
| (ii) ಸಮೀಪದ ದೃಷ್ಟಿ | 0/6 | | 0/8 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆಯೆಂದು ಪರಿಗಣಿಸಲಾಗುವುದು.

b) **<u>ಶ್ರವಣ ಶಕ್ತಿ:</u>**

i) ರಿನ್ನೇಸ್ ಪರೀಕ್ಷೆ (Rinne's Test) ii) ವೆಬ್ಬರ್ ಪರೀಕ್ಷೆ (Weber's Test)
iii) ವರ್ಟಿಗೋ ಪರೀಕ್ಷೆ (Tests for Vertigo)

ಮೇಲಿನ ಪರೀಕ್ಷೆಗಳಲ್ಲಿ ಯಾವುದೇ ನ್ಯೂನತೆಗಳು ಕಂಡು ಬಂದಲ್ಲಿ ಅನರ್ಹತೆ ಎಂದು ಪರಿಗಣಿಸಲಾಗುವುದು.

c) ಅಪಧಮನಿ ಊತ ಸಹ ಅನರ್ಹತೆ (Varicose Veins)

d) ಮಾತಿನಲ್ಲಿ ಅಡಚಣೆ ಸಹ ಅನರ್ಹತೆ (Impediment in speech)

e) ಎದೆಯ ಕ್ಷ–ಕಿರಣ (Chest X-Ray) ವನ್ನು ಪರೀಕ್ಷೆಗೆ ತೆಗೆದುಕೊಳ್ಳಲಾಗುವುದು.

f) ಇತರೆ ಯಾವುದೇ ದೈಹಿಕ ಅಥವಾ ಮಾನಸಿಕ ನ್ಯೂನತೆ ಅಂದರೆ ಅಶಕ್ತ ಅವಯವಗಳು ಅಥವಾ ಕರ್ತವ್ಯ ನಿರ್ವಹಿಸಲು ಅಡ್ಡಿಪಡಿಸುವಂತ ದೇಹದ ಯಾವುದೇ ಅಂಗ ನ್ಯೂನತೆಯು ಸಹ ಅನರ್ಹತೆ.

<u>ಟಿಪ್ಪಣಿ</u>: **ಮೇಲಿನ ಎಲ್ಲಾ ಪರೀಕ್ಷೆಗಳನ್ನು ವೈದ್ಯಕೀಯ ಮಂಡಳಿಯು ನಡೆಸುತ್ತದೆ. ದೈಹಿಕವಾಗಿ ಅರ್ಹರೆಂದು ಪ್ರಮಾಣೀಕರಿಸಿದ ಅಭ್ಯರ್ಥಿಗಳು ಮಾತ್ರ ನೇಮಕಾತಿಗೆ ಅರ್ಹಗೊಳ್ಳುವರು.** ಸಹಿಷ್ಣುತೆ ಪರೀಕ್ಷೆ, ಲಿಖಿತ ಪರೀಕ್ಷೆ ಮತ್ತು ವೈದ್ಯಕೀಯ ಪರೀಕ್ಷೆಗಳಿಗೆ ಹಾಜರಾಗುವ ಅಭ್ಯರ್ಥಿಗಳಿಗೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

**11. <u>ನೇಮಕಾತಿ:</u>**

ವೈದ್ಯಕೀಯ ಮಂಡಳಿಯು ವೈದ್ಯಕೀಯ ಪರೀಕ್ಷೆಯನ್ನು ನಡೆಸಿ, ನೀಡುವ ವರದಿಯನ್ನಾಧರಿಸಿ ಆಯ್ಕೆ ಪ್ರಾಧಿಕಾರವು ಹುದ್ದೆಗಳನುಸಾರ ಅಂತಿಮ ಆಯ್ಕೆ ಪಟ್ಟಿಯನ್ನು ತಯಾರಿಸಿ ನೇಮಕಾತಿ ಪ್ರಾಧಿಕಾರಕ್ಕೆ ಕಳುಹಿಸುವುದು ಮತ್ತು ಸದರಿ ಆಯ್ಕೆ ಪಟ್ಟಿಯನ್ನು ಪ್ರಕಟಿಸುವುದು. ಅಂತಿಮ ಆಯ್ಕೆ ಪಟ್ಟಿಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳು ಆಯ್ಕೆಗೆ ಎಲ್ಲಾ ರೀತಿಯಿಂದಲೂ ಅರ್ಹತೆಯನ್ನು ಹೊಂದಿರುವ ಬಗ್ಗೆ ನೇಮಕಾತಿ ಪ್ರಾಧಿಕಾರವು ದೃಢಪಡಿಸಿಕೊಂಡ ನಂತರ ಖಾಲಿ ಹುದ್ದೆಗಳನುಸಾರ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಅಂತಿಮ ಆಯ್ಕೆ ಪಟ್ಟಿಯು ಪ್ರಕಟಣೆಯ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಸಿಂಧುವಾಗಿರುತ್ತದೆ.

**12. <u>ಜಾತಿ ಮೀಸಲಾತಿ ಪ್ರಮಾಣ ಪತ್ರಗಳು</u> :**

ಜಾತಿ ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಕಂಡ ನಮೂನೆಗಳಲ್ಲಿ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

a) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶಿಲ್ದಾರ್ ರವರಿಂದ ಪಡೆದ ನಮೂನೆ–ಡಿ ಪ್ರಮಾಣ ಪತ್ರ.

b) ಪ್ರವರ್ಗ – 1 ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ–ಇ ಪ್ರಮಾಣ ಪತ್ರ.

c) ಪ್ರವರ್ಗ– 2ಎ, 2ಬಿ, 3ಎ, 3ಬಿ ವರ್ಗದ ಅಭ್ಯರ್ಥಿಗಳಿಗೆ ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ಪಡೆದ ನಮೂನೆ – ಎಫ್ ಪ್ರಮಾಣ ಪತ್ರ.

**<u>ಸೂಚನೆ</u>** : ನಮೂನೆ – ಎಫ್ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 14.12.**2016** ಕ್ಕೆ ಐದು ವರ್ಷಕ್ಕಿಂತ ಹಳೆಯದಾಗಿರಬಾರದು.

**13. <u>ಗ್ರಾಮೀಣ ಮೀಸಲಾತಿ:</u>**

a) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ತರಗತಿ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರಬೇಕು, **ಮತ್ತು**

b) ಅಭ್ಯರ್ಥಿಯು ವ್ಯಾಸಂಗ ಮಾಡಿದ ಸ್ಥಳವು **ವ್ಯಾಸಂಗ ಮಾಡಿದ ಅವಧಿಯಲ್ಲಿ** ಅಂದಿನ ಕರ್ನಾಟಕ ಪೌರ ನಿಗಮಗಳ ಅಧಿನಿಯಮ 1976ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ನಿರ್ದಿಷ್ಟ ಪಡಿಸಿದ ಒಂದು ದೊಡ್ಡ ನಗರ ಪ್ರದೇಶ, ಸಣ್ಣ ನಗರ ಪ್ರದೇಶ ಅಥವಾ ಪರಿವರ್ತನೆಯ ಹಂತದಲ್ಲಿರುವ ಪ್ರದೇಶಗಳ ಹೊರತಾಗಿ ಇತರ ಯಾವುದೇ ಪ್ರದೇಶದಲ್ಲಿರುವ ಶಾಲೆಯಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯಾಗಿರಬೇಕು, **ಮತ್ತು**

c) ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಯು ಕರ್ನಾಟಕ ಅಧಿಸೂಚನೆ ಸಂಖ್ಯೆ. ಸಿಆಸುಇ:08:ಸೆನೆನಿ:2001, ದಿನಾಂಕ 13.02.2001ರ ಪ್ರಕಾರ ಮೇಲೆ ಪರಿಭಾಷಿಸಿದಂತೆ ತರಗತಿ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಪ್ರದೇಶದಲ್ಲಿ ವಿದ್ಯಾಭ್ಯಾಸ ಹೊಂದಿರುವವರು ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ/96/ಸೆನೆನಿ/2005, ದಿನಾಂಕ 10.08.2005ರಲ್ಲಿ ನಿಗದಿಪಡಿಸಿದ ನಮೂನೆ–2ರ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಶಾಲಾ ಮುಖ್ಯೋಪಾಧ್ಯಾಯರಿಂದ ಸಹಿ ಮಾಡಿಸಿ ಮತ್ತು ವ್ಯಾಪ್ತಿಯ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿದ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆಯುವುದು. (ನಮೂನೆ–1 (ನಾನ್–ಕ್ರೀಮಿ ಲೇಯರ್) ಮತ್ತು ನಮೂನೆ–2 ಇವುಗಳು ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ಅಭ್ಯರ್ಥಿಗಳಿಗೆ ಕಡ್ಡಾಯವಾಗಿರುತ್ತದೆ).

d) ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಸೇರಿದ ಅಭ್ಯರ್ಥಿಗಳು ನಮೂನೆ–2ರಲ್ಲಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರದಿಂದ ಪಡೆದು ಸಲ್ಲಿಸುವುದು.

**ಸೂಚನೆ:** ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಪ್ರವರ್ಗ–3ಬಿ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹ ಅಭ್ಯರ್ಥಿಗಳು Non-Creamy Layer ಪ್ರಮಾಣ ಪತ್ರವನ್ನು ಹೊಂದಿರದಿದ್ದಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

**14. ಯೋಜನಾ ನಿರಾಶ್ರಿತರು:**

ಯೋಜನಾ ನಿರಾಶ್ರಿತ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ. ಡಿಪಿಎಆರ್:23:ಎಸ್ಆರ್ಆರ್:99, ದಿನಾಂಕ 23.11.2000 ರನ್ವಯ ಸರ್ಕಾರದ ಸುತ್ತೋಲೆ ಸಂಖ್ಯೆ. ಸಿಆಸುಇ:44: ಸೆನೆನಿ:2001, ದಿನಾಂಕ 27.07.2001ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

**15. ಕನ್ನಡ ಮಾಧ್ಯಮ:**

ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು 1 ನೇ ತರಗತಿಯಿಂದ 10 ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿ ಮತ್ತು ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು.

**16. ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಪ್ರಮಾಣ ಪತ್ರ :**

ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಯೋಜನೆ ಹೊಂದಿದ ಬಗೆಗಿನ ಪ್ರಮಾಣ ಪತ್ರ/ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು.

ಕೆ.ಸಿ.ಎಸ್. (ಸಾಮಾನ್ಯ ನೇಮಕಾತಿ) ನಿಯಮ 9(1) ರನ್ವಯ ಕೇಂದ್ರ ಸಶಸ್ತ್ರದಳದಲ್ಲಿ ಸೇವೆ ಸಲ್ಲಿಸುವಾಗ ಹತರಾದ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಮಾಜಿ ಸೈನಿಕ ಮಕ್ಕಳಿಗೆ ವಯೋಮಿತಿ ಸಡಿಲಿಕೆ, ಸಹಿಷ್ಣುತೆ ಪರೀಕ್ಷೆ ಹಾಗೂ ದೇಹದಾರ್ಢ್ಯತೆ ಪರೀಕ್ಷೆಯಲ್ಲಿ ಯಾವುದೇ ತರಹದ ವಿನಾಯಿತಿಯನ್ನು ನೀಡಲಾಗುವುದಿಲ್ಲ. ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ **ದಿನಾಂಕ: 14.12.2016**ರೊಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

**ಟಿಪ್ಪಣಿ:–** ನಿಗದಿಪಡಿಸಿರುವ ಕೊನೆಯ ದಿನಾಂಕವಾದ **ದಿನಾಂಕ:14.12.2016**ಕ್ಕೆ ಮುಂಚಿತವಾಗಿ ಅಭ್ಯರ್ಥಿಗಳು ಕೋರುವ ಮೀಸಲಾತಿಗಳ ದಾಖಲೆಗಳನ್ನು ಪಡೆದಿಟ್ಟುಕೊಂಡಿರಬೇಕು. ಕೊನೆಯ ದಿನಾಂಕದ ನಂತರ ಮಾಡಿಸಲಾಗಿರುವ ದಾಖಲೆ / ಪ್ರಮಾಣ ಪತ್ರಗಳನ್ನು ಅಂಗೀಕರಿಸಲಾಗುವುದಿಲ್ಲ ಹಾಗೂ ಅಂತಹ ಮೀಸಲಾತಿಯನ್ನು ರದ್ದುಪಡಿಸುವ ಹಕ್ಕು ನೇಮಕಾತಿ ಸಮಿತಿ ಹೊಂದಿರುತ್ತದೆ.

**17. ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೊಳಪಡುವ (ಸ್ಥಳೀಯ) ಅಭ್ಯರ್ಥಿಗಳು ಹೈ–ಕ ಮೀಸಲಾತಿಯ ಸಲುವಾಗಿ ಪಡೆಯಬೇಕಾಗಿರುವ ಪ್ರಮಾಣ ಪತ್ರ:**

ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ ಮೀಸಲಾತಿಯನ್ನು ಕ್ಲೇಮು ಮಾಡುವ ಅರ್ಜಿದಾರರು ಒಂದು ಸ್ವಯಂ ಘೋಷಿತ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಪರಂತು ಅರ್ಜಿ ಸಲ್ಲಿಸುವ ದಿನಾಂಕದಂದು ಅರ್ಜಿದಾರರು ಸ್ಥಳೀಯ ವ್ಯಕ್ತಿಯೆಂದು ಅರ್ಹತೆ ಪಡೆಯುವುದು ಕಡ್ಡಾಯವಾಗಿರುತ್ತದೆ. ತಾತ್ಕಾಲಿಕವಾಗಿ ಆಯ್ಕೆಗೊಂಡ ಅಭ್ಯರ್ಥಿಗಳು ದಾಖಲಾತಿ ಪರೀಕ್ಷೆಗಳ ಸಮಯದಲ್ಲಿ ಸಕ್ಷಮ ಪ್ರಾಧಿಕಾರದಿಂದ ನೀಡಲಾದ ಅರ್ಹತಾ ಪ್ರಮಾಣ ಪತ್ರ (ಅನುಬಂಧ–ಎ) ನೀಡತಕ್ಕದ್ದು. ಅರ್ಹತಾ ಪ್ರಮಾಣ ಪತ್ರದಲ್ಲಿ ಸಕ್ಷಮ ಪ್ರಾಧಿಕಾರಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಲಾದ ಅಂತಿಮ ದಿನಾಂಕದಂದು ಅಭ್ಯರ್ಥಿಯು ಸಾರ್ವಜನಿಕ ಉದ್ಯೋಗ ಆದೇಶದಂತೆ ಸ್ಥಳೀಯ ವ್ಯಕ್ತಿಯೆಂದು ಅರ್ಹತೆ ಪಡೆದಿರುತ್ತಾನೆಂದು ಒಂದು ಅಡಿ ಟಿಪ್ಪಣಿಯನ್ನು ದಾಖಲಿಸುವುದು.

**ಸೂಚನೆ:–**

a) ಈ ಮೇಲಿನ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ ಅಂದರೆ 14.12.**2016** ರೊಳಗೆ ಪಡೆದಿರಬೇಕು ಹಾಗೂ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು.

b) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದ ನಂತರ ಮಾಡಿಸುವ ಮೀಸಲಾತಿ ಪ್ರಮಾಣ ಪತ್ರಗಳನ್ನು ಯಾವುದೇ ಹಂತದಲ್ಲಿ ಗಣನೆಗೆ ತೆಗೆದುಕೊಳ್ಳುವುದಿಲ್ಲ.

c) ಈ ಮೇಲೆ ನಮೂದಿಸಿರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ನೀಡಲಾಗಿರುತ್ತದೆ.

d) ಅಭ್ಯರ್ಥಿಗಳು ಆನ್‌ಲೈನ್ ಮುಖಾಂತರ ಅರ್ಜಿ ಸಲ್ಲಿಸುವುದರಿಂದ ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಲು ಅವಕಾಶ ಇರುವುದಿಲ್ಲ, ಆದರೆ ಈ ಮೇಲಿನ ಪ್ರಮಾಣ ಪತ್ರಗಳನ್ನು / ದಾಖಲೆಗಳನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಅಂದರೆ, ದಿನಾಂಕ: 14.12.2016ರ ಒಳಗೆ ಪಡೆದಿರಬೇಕು ಇಲ್ಲವೇ ಸಿಂಧುವಾಗಿರಬೇಕು ಹಾಗೂ ನೇಮಕಾತಿ ಸಮಿತಿಯು ಪರಿಶೀಲನೆಗಾಗಿ ಹಾಜರುಪಡಿಸಲು ಸೂಚಿಸಿದಾಗ ಅರ್ಜಿಯಲ್ಲಿ ನಮೂದಿಸಿರುವ ಮೀಸಲಾತಿಯ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದ್ದಲ್ಲಿ ಕೆಳಕಂಡ ಕ್ರಮ ಕೈಗೊಳ್ಳಲಾಗುವುದು.

e) ವಿವಿಧ ಮೀಸಲಾತಿ ಕೋರಿ ಹಾಜರು ಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರು ಪಡಿಸದಿದ್ದಲ್ಲಿ: ಆ ಮೀಸಲಾತಿಯನ್ನು ರದ್ದುಪಡಿಸಲಾಗುವುದು, ಹಾಗೆಯೇ ಪ್ರವರ್ಗ ಕೋರಿ ಅರ್ಜಿ ಸಲ್ಲಿಸಿ, ಜಾತಿ ಪ್ರಮಾಣ ಪತ್ರವನ್ನು ಹಾಜರು ಪಡಿಸದಿದ್ದಲ್ಲಿ ಅಥವಾ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪ್ರಮಾಣ ಪತ್ರವು ಇಲ್ಲದಿದ್ದಲ್ಲಿ ಆ ಪ್ರವರ್ಗವನ್ನು ರದ್ದುಪಡಿಸಿ ಸಾಮಾನ್ಯ ಅರ್ಹತೆಯಲ್ಲಿ ಅರ್ಹತೆಯನ್ನು ಹೊಂದಿದ್ದಲ್ಲಿ ಮಾತ್ರ ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಪರಿಗಣಿಸಲಾಗುವುದು.

**18. ಪ್ರಮುಖವಾದ ಸೂಚನೆಗಳು:**

ಅಭ್ಯರ್ಥಿಗಳು ಯಾವುದೇ ಪ್ರಮಾಣ ಪತ್ರಗಳನ್ನು ಅರ್ಜಿಯೊಂದಿಗೆ ಲಗತ್ತಿಸಕೂಡದು. ಆದರೆ ಈ ಕೆಳಕಂಡ ಪ್ರಮಾಣ ಪತ್ರಗಳನ್ನು ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ: 14.12.2016ರೊಳಗೆ ಸಿಂಧುವಾಗಿರುವಂತೆ ಪಡೆದಿಟ್ಟುಕೊಂಡಿದ್ದು, ಸಮಿತಿಯು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.

a) ವಿದ್ಯಾರ್ಹತೆಯ ಅಂಕಪಟ್ಟಿ.

b) ಹುಟ್ಟಿದ ದಿನಾಂಕದ ಪ್ರಮಾಣ ಪತ್ರ (ಎಸ್.ಎಸ್.ಎಲ್.ಸಿ ಅಥವಾ ತತ್ಸಮಾನ ಪ್ರಮಾಣ ಪತ್ರ)

c) ಸರ್ಕಾರಿ ಇಲಾಖೆಯಲ್ಲಿ/ರಾಜ್ಯಸರ್ಕಾರದ/ಕೇಂದ್ರ ಸರ್ಕಾರದ/ಸರ್ಕಾರದ ಯಾವುದೇ ಪ್ರಾಧಿಕಾರದಲ್ಲಿ/ರಾಜ್ಯ ಅಥವಾ ಕೇಂದ್ರ ಸರ್ಕಾರದ ಸಾರ್ವಜನಿಕ ಸ್ವಾಮ್ಯದ ಕಂಪನಿಗಳಲ್ಲಿ ಪ್ರಸ್ತುತ ಉದ್ಯೋಗಿಯಾಗಿದ್ದಲ್ಲಿ ಅಂತಹವರು ಇಲಾಖಾ ವತಿಯಿಂದ ಕರ್ತವ್ಯದಿಂದ ಬಿಡುಗಡೆ ಮಾಡುವ ಬಗ್ಗೆ ಇಚ್ಛಾ ಅನುಮತಿ ಪತ್ರ.

d) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, 2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿ ಅಭ್ಯರ್ಥಿಗಳು ನಮೂನೆ ಡಿ/ಇ/ಎಫ್ ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದ್ದು.

e) ಯೋಜನಾ ನಿರಾಶ್ರಿತ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್‌ರವರಿಂದ ಪಡೆದ ಪ್ರಮಾಣ ಪತ್ರ.

f) ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಯೋಜನೆ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).

g) ಮಾಜಿ ಸೈನಿಕ ಮಕ್ಕಳು ಮೀಸಲಾತಿ ಪಡೆಯುವ ಅಭ್ಯರ್ಥಿಗಳು ಅವರ ತಂದೆಯವರು ಕರ್ತವ್ಯ ನಿರ್ವಹಿಸುತ್ತಿದ್ದ ಕೇಂದ್ರ ಸಶಸ್ತ್ರದಳದ ಅಧಿಕಾರಿಗಳಿಂದ ಅವಲಂಬಿತ ಪ್ರಮಾಣ ಪತ್ರ ಮತ್ತು ಸೈನಿಕ ಬೋರ್ಡ್‌ನಿಂದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

h) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿರಬೇಕು.

i) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ರುಜು ಮಾಡಿಸಿಟ್ಟು ಕೊಂಡಿರತಕ್ಕದ್ದು.

